# ಮುನ್ನುಡಿ

ಸಂಸ್ಕೃತಭಾಷೆಯನ್ನು ಕಲಿಯಲು ಪ್ರಾರಂಭಿಸುವವರು ಮೊದಲು ಅಮರವನ್ನು ಓದಬೇಕು. ಕೋಶಗಳು ಅನೇಕವಿದ್ದರೂ ಅಮರ ಕೋಶದಂತೆ ಪರಿಷ್ಕೃತ ವಾದ ಕೋಶ ಬೇರೊಂದಿಲ್ಲ. ಬಾಲ್ಯದಲ್ಲಿ ಇದನ್ನು ಅಭ್ಯಾಸ ಮಾಡಿದವರಿಗೆ ಸಂಸ್ಕೃತಭಾಷೆ ಸುಲಭವಾಗಿ ಸ್ವಾಧೀನಪಡಿಸಿಕೊಳ್ಳಲು ಸಾಧ್ಯವಾಗುತ್ತದೆ. ಇದನ್ನು ಬರೆದ ಅಮರಸಿಂಹ ಕವಿಯು ೬ನೇ ಶತಮಾನದಲ್ಲಿದ್ದನೆಂದು ಪ್ರಸಿದ್ಧಿ ಇದೆ. ಇವನು ಬೌದ್ಧನೆಂದು ವಿಮರ್ಶಕರ ಅಭಿಪ್ರಾಯ. ಬುದ್ಧನನ್ನೇ ಮೊದಲು ಪ್ರಾರ್ಥಿ ಸಿರುವುದೂ, ಬ್ರಹ್ಮಾದಿಗಳಿಗಿಂತ ಮೊದಲು ಸರ್ವಜ್ಞ ಬುದ್ಧನ ಪರ್ಯಾಯಪದ ಹೇಳಿ ರುವುದೂ, ನಾನಾರ್ಥ ವರ್ಗದಲ್ಲಿ "ಜಿನಯಮೌ" ಎಂಬುದರಿಂದ ದ್ವಂದ್ವದಲ್ಲಿ ಪೂಜ್ಯ ನನ್ನು ಮೊದಲು ನಿರ್ದೇಶಿಸಬೇಕೆಂದುದರಿಂದ ಜಿನನಿಗೆ ಪ್ರಾಶಸ್ತ್ಯ ತೋರಿಸಲು ಅವನನ್ನು ಮೊದಲು ಹೇಳಿರುವನೆಂದೂ, ಹೀಗೆ ಹಲವು ಕಾರಣ ಕೊಡುತ್ತಾರೆ. ಈ ಕಾರಣಗಳು ಸಮಂಜಸವಾಗಿ ತೋರುವುದಿಲ್ಲ. ಮಂಗಳ ಶ್ಲೋಕದಲ್ಲಿ ದೇವನಾರೆಂದು ಹೇಳಿಲ್ಲ. ಯಾವ ದೇವನಾಗಲಿ ಅವನು ದಯಾದಿಗುಣ ಪರಿಪೂರ್ಣನಾಗಿರುತ್ತಾನೆ. ಸರ್ವಜ್ಞಃ ಸುಗತಃ — ಎಂದು ಮೊದಲು ಹೇಳಿದುದನ್ನು ಇನ್ನೊಂದು ರೀತಿಯಿಂದ ಸಮರ್ಥಿಸಬಹುದು. ವೇದಬಾಹಿರರಾದ ಅಸುರರನ್ನು ಹೇಳಿದೊಡನೆ ಅದನ್ನು ಹೇಳಿರುವುದರಿಂದ ಅವನು ಅವೈದಿಕ ಮತಾವಲಂಬಿ ಎಂದು ಸಂಬಂಧ ಕಲ್ಪಿಸಬಹುದು. ಮನುಷ್ಯ ವರ್ಗವಾದೊಡನೆ ವರ್ಣಾಶ್ರಮ ಧರ್ಮಕ್ಕೆ ಅನುಗುಣವಾಗಿ ಕ್ರಮವಾಗಿ ಬ್ರಹ್ಮವರ್ಗ ಹೇಳುತ್ತಾನೆ. ಬ್ರಹ್ಮವರ್ಗದಲ್ಲಿ ಹೇಳಿದ ಸೂಕ್ಷ್ಮ ವಿಷಯಗಳನ್ನು ಪರಿಶೀಲಿಸಿದರೆ ನಿಷ್ಠ ಬ್ರಾಹ್ಮಣನಲ್ಲದೆ ಬೇರೆಯವರು ಅದನ್ನು ತಿಳಿಯಲು ಸಾಧ್ಯ ವಿಲ್ಲವೆಂದು ಹೇಳಬಹುದು. ಆದುದರಿಂದ ಬೌದ್ಧನೆಂದು ನಿರ್ಣಯಿಸುವುದಕ್ಕೆ ಸಿಗುವ ಕಾರಣಗಳಿಗಿಂತ ಇತರನೆಂದು ಹೇಳಲು ಅಧಿಕ ಕಾರಣಗಳು ದೊರೆಯುತ್ತವೆ. ಅದು ಹೇಗೆ ಇರಲಿ. ಸಕಲಶಾಸ್ತ್ರ ಪಾರಂಗತನಾದ ಈ ಕವಿಯು ಅಮರಕೋಶವೆಂಬ ಅಮರ ಕೃತಿಯನ್ನು ರಚಿಸಿ ಯಶಃಕಾಯನಾಗಿರುತ್ತಾನೆ.

ಅಮರಕೋಶಕ್ಕೆ ಇದುವರೆಗೆ ಅನೇಕರು ನಾನಾ ರೀತಿಯಿಂದ ಟಿಪ್ಪಣಿಯನ್ನು ರಚಿಸಿರುತ್ತಾರೆ. ಆದರೆ ಉತ್ತಮ ಕನ್ನಡ ವ್ಯಾಖ್ಯಾನವಿರುವ ಪುಸ್ತಕ ಎಲ್ಲಿಯೂ ದೊರೆಯುವುದಿಲ್ಲ. ಪ್ರಕೃತ ಮಾನ್ಯ ಮಿತ್ರರಾದ ನಮ್ಮ ಕಾಲೇಜಿನ ಇಂಗ್ಲೀಷ್ ಅಧ್ಯಾಪಕರಾದ ಶ್ರೀಮಾನ್ ಬಿ. ಎಸ್. ಲಕ್ಷ್ಮೀನರಸಿಂಹಯ್ಯನವರು ನನಗೆ ಇದನ್ನು ಬರೆಯಲು ಪ್ರೇರೇಪಿಸಿದುದಲ್ಲದೆ ತತ್ಕಾಲದಲ್ಲಿ ದ್ರವ್ಯ ಸಹಾಯವನ್ನೂ ಮಾಡಿ ಉಪಕಾರ ಮಾಡಿರುತ್ತಾರೆ. ಮಿತ್ರರ ಸಹಕಾರವಿಲ್ಲದೆ ನನ್ನ ಯಾವ

ಕಾರ್ಯವೂ ಮುಂದುವರಿಯುವುದಿಲ್ಲ. ಇದಕ್ಕೋಸ್ಕರ ಮಿತ್ರವೃಂದಕ್ಕೆ ಚಿರಋಣಿಯಾಗಿರುತ್ತೇನೆ.

ಪ್ರಕೃತ ಸಂಸ್ಕೃತ ಪರೀಕ್ಷೆಯ ದೃಷ್ಟಿಯಿಂದಲೂ ದುರ್ಬೋಧವಾದುದರಿಂದಲೂ ವನೌಷಧಿ ವರ್ಗವನ್ನು ಮೂರನೇ ಕಾಂಡದ ಆದಿಯಲ್ಲಿ ಸೇರಿಸಿರುತ್ತೇನೆ. ಶುದ್ಧವಾಗಿ ತರಲು ಆದಷ್ಟು ಶ್ರಮ ವಹಿಸಿದೆ. ವಿಷಯವನ್ನು ಬಿಡದೆ ಅಧಿಕ ವಿವರಿಸದೆ ಸರಳವಾಗಿ ಅರ್ಥವನ್ನು ಬರೆದಿರುತ್ತೇನೆ. ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಮಂಗ್ಳೂರ್ ಪ್ರೆಸ್ ಮಾಲಿಕರಾದ ಶ್ರೀ ಶ್ರೀಪತಿರಾಯರಿಗೆ ಕೃತಜ್ಞನಾಗಿರುತ್ತೇನೆ. ಈ ಗ್ರಂಥವು ಸಂಸ್ಕೃತಭಾಷಾಭ್ಯಾಸಿಗಳಾದ ಕರ್ಣಾಟಕ ಬಂಧುಗಳಿಗೆ ಸಹಾಯಕವಾಗಿ ಪ್ರಸಿದ್ಧವಾಗಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

ಈ ಗ್ರಂಥವನ್ನು ಮೈಸೂರು ಸರ್ಕಾರದ ಡಿ. ಪಿ. ಇ. ಐ. ಅವರ ಆರ್ಡರ್ ನಂ T 2. 81. LV I 1/67-68 ಮೇರೆಗೆ ಹೈಸ್ಕೂಲ್ ಕಾಲೇಜು ಲೈಬ್ರೆರಿಗಳಲ್ಲಿ ಉಪಯೋಗಕ್ಕಾಗಿ ಕೊಂಡುಕೊಳ್ಳಬಹುದೆಂದು ಅನುಮತಿ ನೀಡಲಾಗಿದೆ.

## ತೃತೀಯ ಮುದ್ರಣ

ಅಮರಕೋಶವು ಜನಪ್ರಿಯವಾಗಿ ಈಗ ೩ನೇಮುದ್ರಣ ಹೊಂದಿದೆ. ಡೆಲ್ಲಿಯಲ್ಲಿರುವ ಸ್ಪೆಶಲ್, ಸಂಸ್ಕೃತ ವಿಭಾಗದ ಅಧಿಕಾರಿಗಳು ನನ್ನ ಪ್ರತಿಯೊಂದು ಪುಸ್ತಕಕ್ಕೂ ರಿಕ್ತಹಸ್ತವನ್ನು ತೋರಿಸುತ್ತಾ ಬಂದುದು ಶೋಚನೀಯವಾಗಿದೆ. ಜನತೆಯ ಮುಂದೆ ಈ ದುಃಖವನ್ನಿಡಬೇಕಾಗಿದೆ. ಕಾಗದದ ಅಭಾವ ಕಾಲದಲ್ಲಿಯೂ ನನಗೆ ಉತ್ತೇಜನವನ್ನು ಕೊಟ್ಟು ಉದಾರ ಸಹಾಯದಿಂದ ಮೂರನೇ ಮುದ್ರಣವನ್ನು ಅಂದವಾಗಿಯೂ ಶೀಘ್ರವಾಗಿಯೂ ಮಾಡಿಕೊಟ್ಟ ಮಿತ್ರರಾದ ಶ್ರೀಯುತ ಮಾರ್ಪಳ್ಳಿ ಅವರಿಗೆ ಚಿರಋಣಿಯಾಗಿರುತ್ತೇನೆ. ಬಹುಕಾಲದಿಂದ ಪದಸೂಚಿಯನ್ನು ಹಾಕಬೇಕೆಂದು ಬಯಸಿದುದೂ ಇಂದು ಸಾಫಲ್ಯಗೊಳಿಸಿದ ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಅದು ಅಲ್ಪವೇ. ಅವರಿಗೆ ಆಯುರಾರೋಗ್ಯಾದಿ ಸಕಲ ಸಂಪತ್ತನ್ನು ಪರಮಾತ್ಮನು ಒದಗಿಸಲೆಂದು ಪ್ರಾರ್ಥಿಸುತ್ತೇನೆ. ಅನಿವಾರ್ಯವಾಗಿ ಬೆಲೆ ಏರಿಸಿದುದನ್ನು ಮನ್ನಿಸಿ ಹಿಂದಿನಂತೆ ಕರ್ಣಾಟಕ ಜನತೆ ನನಗೆ ಪ್ರೋತ್ಸಾಹವೀಯುತ್ತದೆಂದು ನಂಬಿರುತ್ತೇನೆ.

ತಾ ೫-೭-೭೪
ಮೈಸೂರು

ಸಜ್ಜನ ವಿಧೇಯ
ಜಿ. ವಿಷ್ಣುಮೂರ್ತಿ ಭಟ್ಟ

॥ ಶ್ರೀ ಗಣೇಶಾಯ ನಮಃ ॥

ಶ್ರೀಮದಮರಸಿಂಹವಿರಚಿತಃ

# ಅಮರಕೋಶಃ

## ಅವತರಣಿಕೆ

ಯಸ್ಯ ಜ್ಞಾನದಯಾಸಿಂಧೋರಗಾಧಸ್ಯಾನಘಾ ಗುಣಾಃ ।
ಸೇವ್ಯತಾಮಕ್ಷಯೋ ಧೀರಾಃ ಸ ಶ್ರಿಯೈ ಚಾಮೃತಾಯ ಚ ॥ ೧ ॥
ಸಮಾಹೃತ್ಯಾನ್ಯತಂತ್ರಾಣಿ ಸಂಕ್ಷಿಪ್ತೈಃ ಪ್ರತಿಸಂಸ್ಕೃತೈಃ ।
ಸಂಪೂರ್ಣಮುಚ್ಯತೇ ವರ್ಗೈರ್ನಾಮಲಿಂಗಾನುಶಾಸನಮ್ ॥ ೨ ॥

---

ಗ್ರಂಥವು ನಿರ್ವಿಘ್ನವಾಗಿ ಸಮಾಪ್ತಿ ಹೊಂದಲು ಕವಿಯು ಗ್ರಂಥಾದಿಯಲ್ಲಿ ಮಂಗಳಶ್ಲೋಕವನ್ನು ಹೇಳಿರುತ್ತಾನೆ. ಹೇ ಧೀರಾಃ — ಎಲೈ ಪಂಡಿತೋತ್ತಮರೇ, ಜ್ಞಾನದಯಾಸಿಂಧೋಃ — ಪೂರ್ಣಜ್ಞಾನಕ್ಕೆ ಮತ್ತು ಪ್ರಾಣಿದಯೆಗೆ ಸಮುದ್ರ ನಂತಿರುವ, ಅಗಾಧಸ್ಯ — ಗಂಭೀರನಾಗಿರುವ, ಯಸ್ಯ — ಯಾವ ದೇವನ, ಗುಣಾಃ — ದಯಾದಿಗುಣಗಳು, ಅನಘಾಃ — ಪಾಪರಹಿತವಾಗಿವೆಯೋ, ಅಕ್ಷಯಃ—ನಾಶ ರಹಿತನಾದ, ಸಃ — ಆ ದೇವನು, ಶ್ರಿಯೈ — ಸಂಪತ್ತಿಗಾಗಿಯೂ, ಅಮೃತಾಯ ಚ — ನಿತ್ಯಸುಖರೂಪ ಮೋಕ್ಷಕ್ಕಾಗಿಯೂ, ಸೇವ್ಯತಾಂ — ಸೇವಿಸಲ್ಪಡಲಿ.

ಅಮರಸಿಂಹನು ಬೌದ್ಧನೆಂದು ಕೆಲವರ ವಾದ. ಆದುದರಿಂದ ದಯಾಮಯ ನಾದ ಬುದ್ಧದೇವನನ್ನು ಪ್ರಾರ್ಥಿಸಿರುತ್ತಾನೆಂದು ಹೇಳುತ್ತಾರೆ. ಸಂಸ್ಕೃತಪದಗಳಿಗೆ ನಾನಾ ವ್ಯುತ್ಪತ್ತಿಯಿಂದ ನಾನಾರೀತಿ ಅರ್ಥ ಮಾಡಲು ಬರುವುದರಿಂದ ಬುದ್ಧನೇ ಆಗಬೇಕೆಂದಿಲ್ಲ. ಶಿವನಾದರೂ ಆಗಬಹುದು, ವಿಷ್ಣುವಾದರೂ ಆಗಬಹುದು. ಪರಮಾತ್ಮನ ಗುಣಗಳು ಅಮೋಘವಾಗಿವೆ. ಅವನಲ್ಲಿ ಪರಿಪೂರ್ಣವಾದ ಜ್ಞಾನ ದಯಾದಿಗುಣಗಳು ಶೋಭಿಸುತ್ತವೆ. ಐಶ್ವರ್ಯ, ಜ್ಞಾನ, ಸುಖಕ್ಕಾಗಿ ಅಂತಹ ಮಹಾಮಹಿಮನನ್ನು ನಾನು ಸೇವಿಸುತ್ತೇನೆ; ನೀವೂ ಸೇವಿಸಿರಿ ಎಂದು ಕವಿಯು ಮಂಗಳರೂಪದಿಂದ ಉಪದೇಶಿಸುತ್ತಾನೆ.

ಗ್ರಂಥದ ವಿಷಯ ಪ್ರಯೋಜನಗಳನ್ನು ತೋರಿಸುತ್ತಾನೆ : ಅನ್ಯತಂತ್ರಾಣಿ — ಇತರ ಕೋಶಗಳನ್ನು, ಸಮಾಹೃತ್ಯ — ಸಂಗ್ರಹಿಸಿ, ಸಂಕ್ಷಿಪ್ತೈಃ — ಸಂಕ್ಷೇಪಗೊಳಿಸಿದ, ಪ್ರತಿಸಂಸ್ಕೃತೈಃ — ಅಸಾರಾಂಶವನ್ನು ಬಿಟ್ಟು, ಕ್ರಮಾದಿಗಳಿಂದ ಉತ್ಕರ್ಷ

ಪ್ರಾಯಶೋ ರೂಪಭೇದೇನ ಸಾಹಚರ್ಯಾಚ್ಚ ಕುತ್ರಚಿತ್ ।
ಸ್ತ್ರೀಪುಂನಪುಂಸಕಂ ಜ್ಞೇಯಂ ತದ್ವಿಶೇಷವಿಧೇಃ ಕ್ವಚಿತ್ ॥ ೩ ॥

---

ಹೊಂದಿದ, ವರ್ಗೈಃ — ಪ್ರಕರಣಗಳಿಂದ, ಸಂಪೂರ್ಣಂ — ತುಂಬಿರುವ, ನಾಮ ಲಿಂಗಾನುಶಾಸನಂ — 'ನಾಮಲಿಂಗಾನುಶಾಸನ'ವೆಂಬ ಕೋಶವು, ಉಚ್ಯತೇ — ಹೇಳಲ್ಪಡುತ್ತದೆ. ನಾಮವೆಂದರೆ ಹೆಸರು, ಲಿಂಗವೆಂದರೆ ಸ್ತ್ರೀಪುಂನಪುಂಸಕಲಿಂಗ ಗಳು. ಇವುಗಳನ್ನು ವಿವೇಕದಿಂದ ಬೋಧಿಸುವುದೇ ನಾಮಲಿಂಗಾನುಶಾಸನ. ತ್ರಿಕಾಂಡಕೋಶಾದಿಗಳು ಕೇವಲ ನಾಮಪ್ರತಿಪಾದಕವಾಗಿದ್ದರೆ ವರರುಚ್ಯಾದಿಕೃತ ಕೋಶಗಳು ಕೇವಲ ಲಿಂಗವನ್ನು ಬೋಧಿಸುತ್ತವೆ. ಅದೂ ಒಂದು ಕ್ರಮವನ್ನನು ಸರಿಸಿ ಹೇಳಿಲ್ಲ. ಇಲ್ಲಿಯಾದರೋ ನಾಮ ಲಿಂಗ ಎರಡನ್ನೂ ಹೇಳುವುದಲ್ಲದೆ ಉಪ ಯೋಗವಿಲ್ಲದವನ್ನು ಬಿಟ್ಟು, ಉಳಿದವುಗಳನ್ನು ಒಂದು ಕ್ರಮದಿಂದ ಬೋಧಿಸುವುದ ರಿಂದ ಎಲ್ಲಾ ಕೋಶಗಳಿಗಿಂತ ಇದು ಉತ್ಕೃಷ್ಟವಾಗಿದೆಯೆಂದು ತಾತ್ಪರ್ಯ. ಅಲ್ಲಲ್ಲಿ ಹೊಂದಿಕೊಳ್ಳುವ ಪದಗಳನ್ನು ಆರಿಸಿ ಆಯಾಯ ಪ್ರಕರಣದಲ್ಲಿ ಕ್ರಮವಾಗಿ ಹೇಳಿದೆ. ಇಲ್ಲಿ ಹೇಳಿದ ಪದಗಳು ವ್ಯಾಕರಣಕ್ಕೆ ವಿರುದ್ಧವಾಗಿಲ್ಲ. ಕವಿಪ್ರಯೋಗ, ಲೋಕ ರೂಢಿಗನುಸಾರವಾಗಿರುತ್ತವೆ.

ಗ್ರಂಥದಲ್ಲಿ ಹೇಳಿರುವ ಪದಗಳ ಲಿಂಗಜ್ಞಾನೋಪಾಯವನ್ನು ವಿವರಿಸುತ್ತಾನೆ : ಸ್ತ್ರೀಪುಂನಪುಂಸಕಂ — ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗಗಳನ್ನು, ಪ್ರಾಯಶಃ — ಸಾಮಾನ್ಯವಾಗಿ, ರೂಪಭೇದೇನ — ಸ್ತ್ರೀಪ್ರತ್ಯಯಗಳಿಂದ ಆದ ಧೀರ್ಘಾದಿಗಳು, ಪುಲಿಂಗದಲ್ಲಿ ವಿಸರ್ಗ, ನಪುಂಸಕದಲ್ಲಿ ಬಿಂದು (೦) ಬಂದು ಉಂಟಾದ ರೂಪ ವ್ಯತ್ಯಾಸದಿಂದಲೂ. ಕುತ್ರಚಿತ್ — ಕೆಲವು ಕಡೆ, ಸಾಹಚರ್ಯಾತ್ ಚ—ಪ್ರಸಿದ್ಧವಾಗಿ ತಿಳಿಯಲ್ಪಟ್ಟ ಶಬ್ದದ ಸಾಂನಿಧ್ಯದಿಂದಲೂ, ಕ್ವಚಿತ್ — ಇವೆರಡರಿಂದಲೂ ತಿಳಿಯಲ ಸಾಧ್ಯವಾದ ಸ್ಥಳದಲ್ಲಿ, ತದ್ವಿಶೇಷವಿಧೇಃ - ಆ ಲಿಂಗವನ್ನು ಕಂಠತಃ ಹೇಳಿರುವುದ ರಿಂದಲೂ ತಿಳಿಯಬೇಕು. ಸಾಮಾನ್ಯವಾಗಿ ದೀರ್ಘಾಂತವಾಗಿದ್ದರೆ ಸ್ತ್ರೀಲಿಂಗ ವಾಗುತ್ತದೆ, ಹ್ರಸ್ವ ವಿಸರ್ಗಾಂತವಾಗಿದ್ದರೆ ಪುಲ್ಲಿಂಗವೆಂದು, ಸೊನ್ನೆ ಕೊನೆಯಲ್ಲಿದ್ದರೆ ನಪುಂಸಕವೆಂದು ತಿಳಿಯಬೇಕು ಉದಾ : ಪದ್ಮಾ, ಈಶಃ, ಮಾನಸಂ. ಆ ಪದವನ್ನು ತಿಳಿಸುವ ಸರ್ವನಾಮಪದಗಳಿಂದಲೂ (ತತ್, ಸಃ, ಸಾ) ಲಿಂಗವನ್ನು ನಿರ್ಣಯಿಸ ಬಹುದು. ಇಮೂ ಅಲ್ಲದೆ 'ಅಶ್ವಯುಗಶ್ವಿನೀ' 'ಭಾನುಃಕರೋ' 'ವಿಯದ್ವಿಷ್ಣು ಪದಂ' ಇತ್ಯಾದಿ ಸ್ಥಳದಲ್ಲಿ ಸಾಹಚರ್ಯದಿಂದ ತಿಳಿಯಬಹುದು. ಪ್ರಸಿದ್ಧಲಿಂಗ ತಿಳಿಯುವ ಅಶ್ವಿನೀಪದ ಸಹವಾಸದಿಂದ ಅಶ್ವಯುಕ್ ಸ್ತ್ರೀಲಿಂಗವೆಂದೂ, ಕರಶಬ್ದ ಸಾಹಚರ್ಯದಿಂದ ಭಾನುಪದ ಪುಲ್ಲಿಂಗವೆಂದೂ, ವಿಷ್ಣುಪದಂ ಎಂಬುದರೊಡನೆ ಹೇಳಿದ ವಿಯತ್ ನಪುಂಸಕವೆಂದೂ ತಿಳಿಯಬಹುದು ಕೆಲವು ಕಡೆ ಇವೆರಡರಿಂದಲೂ

ಭೇದಾಖ್ಯಾನಾಯ ನ ದ್ವಂದ್ವೋ ನೈಕಶೇಷೋ ನ ಸಂಕರಃ ।
ಕೃತೋಽತ್ರ ಭಿನ್ನಲಿಂಗಾನಾಮನುಕ್ತಾನಾಂ ಕ್ರಮಾದೃತೇ ॥ ೪ ॥
ತ್ರಿಲಿಂಗ್ಯಾಂ ತ್ರಿಷ್ವಿತಿಪದಂ ಮಿಥುನೇತು ದ್ವಯೋರಿತಿ ।
ನಿಷಿದ್ಧಲಿಂಗಂ ಶೇಷಾರ್ಥಂ ತ್ವಂತಾಥಾದಿ ನ ಪೂರ್ವಭಾಕ್ ॥ ೫ ॥

---

ಅಸಾಧ್ಯವಾದಾಗ ವಿಶೇಷಲಿಂಗಗಳನ್ನು ಹೇಳಿರುವುದರಿಂದ ಲಿಂಗವನ್ನು ತಿಳಿಯಬೇಕು. ಉದಾ : 'ಭೇರೀ ಸ್ತ್ರೀ ದುಂದುಭಿಃ ಪುಮಾನ್' — ಇತ್ಯಾದಿ.

ಅನುಕ್ತಾನಾಂ — ಮತ್ತೊಂದು ಸ್ಥಳದಲ್ಲಿ ಹೇಳದಿರುವ, ಭಿನ್ನಲಿಂಗಾನಾಂ — ಬೇರೆಬೇರೆ ಲಿಂಗಗಳುಳ್ಳ ಶಬ್ದಗಳಿಗೆ, ಭೇದಾಖ್ಯಾನಾಯ — ಲಿಂಗಭೇದ ಹೇಳಲು, ದ್ವಂದ್ವಃ — ದ್ವಂದ್ವಸಮಾಸವು, ಏಕಶೇಷಃ — ಏಕಶೇಷವೂ, ನಕೃತಃ—ಮಾಡಲ್ಪಡಲಿಲ್ಲ, ಕ್ರಮಾತ್ ಋತೇ — ಕ್ರಮವನ್ನು ಬಿಟ್ಟು, ಸಂಕರಃ ನಕೃತಃ — ಮಿಶ್ರಣ ಮಾಡಿಲ್ಲ.

'ದೇವತಾದೈವತಾಮರಾಃ' ಎಂದು ದ್ವಂದ್ವ ಮಾಡಿಲ್ಲ. ಏಕೆಂದರೆ ಇವು ಭಿನ್ನಭಿನ್ನ ಲಿಂಗಗಳು. ಅದಕ್ಕೋಸ್ಕರ ಬೇರೆಬೇರೆಯಾಗಿ ಹೇಳಿದೆ. ಒಂದೇ ಲಿಂಗವಾಗಿದ್ದರೆ ಆಗ ದ್ವಂದ್ವವನ್ನೋ ಏಕಶೇಷವನ್ನೋ ಲಾಘವಕ್ಕೋಸ್ಕರ ಮಾಡಿರುತ್ತಾರೆ. ಸ್ತ್ರೀಪುಂನಪುಂಸಕಲಿಂಗಗಳನ್ನೂ ಕ್ರಮವಾಗಿಯೇ ಹೇಳಿದೆ. ಆ ವಿಷಯದಲ್ಲಿ ಮಿಶ್ರಣ ಮಾಡಿಲ್ಲ. ಉದಾ : 'ಸ್ತವಃ ಸ್ತೋತ್ರಂ ಸ್ತುತಿರ್ನುತಿಃ' ಎಂದು ಹೇಳಿದೆ. 'ಸ್ತುತಿಃ ಸ್ತೋತ್ರಂ ಸ್ತವೋನುತಿಃ' ಎಂದು ಹೇಳಿಲ್ಲ. ಹೀಗೆ ಹೇಳಿದರೆ ಸಾಂಕರ್ಯ ಬರುತ್ತದೆ.

ತ್ರಿಲಿಂಗ್ಯಾಂ — ಮೂರು ಲಿಂಗಗಳಲ್ಲಿಯೂ ಇದೆಯೆಂದು ಹೇಳುವಾಗ, ತ್ರಿಷು ಇತಿ ಪದಂ — 'ತ್ರಿಷು' ಎಂಬ ಪದವನ್ನೂ, ಮಿಥುನೇತು — ಸ್ತ್ರೀಲಿಂಗಪುಲ್ಲಿಂಗಗಳೆರಡರಲ್ಲಿಯೆಂದು ಹೇಳುವಾಗ, ದ್ವಯೋರಿತಿ — 'ದ್ವಯೋಃ' ಎಂಬ ಪದವನ್ನೂ ಹೇಳಿರುತ್ತಾರೆ. ನಿಷಿದ್ಧಲಿಂಗಂ — ನಿಷೇಧಿಸಿದ ಲಿಂಗವಿರುವ ಪದವು, ಶೇಷಾರ್ಥಂ— ಉಳಿದ ಲಿಂಗವುಳ್ಳದ್ದೆಂದು ತಿಳಿಯಬೇಕು. ತ್ವಂತ — 'ತು' ಕೊನೆಯಲ್ಲಿರುವ, ಅಥಾದಿ — 'ಅಥ' ಎಂಬುದು ಆದಿಯಲ್ಲಿರುವ ಪದವು, ನಪೂರ್ವಭಾಕ್ — ಪೂರ್ವಾನ್ವಯಿಯಾಗುವುದಿಲ್ಲವೆಂದು ತಿಳಿಯಬೇಕು.

'ತ್ರಿಷುಸ್ಫುಲಿಂಗೋಽಗ್ನಿಕಣಃ' ಇತ್ಯಾದಿ ಸ್ಥಳದಲ್ಲಿ ಸ್ಫುಲಿಂಗಾದಿಗಳು ಮೂರು ಲಿಂಗಗಳುಳ್ಳವುಗಳೆಂದು ತಿಳಿಸಲು 'ತ್ರಿಷು' ಎಂದಿರುತ್ತಾರೆ. 'ದ್ವಯೋರ್ಜ್ವಾಲಕೀಲೌ' ಇತ್ಯಾದಿಗಳಲ್ಲಿ ಜ್ವಾಲಾದಿಗಳು ಪುಲ್ಲಿಂಗಸ್ತ್ರೀಲಿಂಗದಲ್ಲಿರುತ್ತವೆಯೆಂದು ತಿಳಿಸಲು 'ದ್ವಯೋಃ' ಎಂದಿರುತ್ತಾರೆ. 'ವಜ್ರಮಸ್ತ್ರೀ' ಇತ್ಯಾದಿಗಳಲ್ಲಿ ಸ್ತ್ರೀಲಿಂಗ

ನಿಷೇಧ ಮಾಡಿದಾಗ ಅದು ಪುಂನಪುಂಸಕಗಳುಳ್ಳದೆಂದು ತಿಳಿಯಬೇಕು. 'ನಗರೀ – ತ್ವಮರಾವತೀ' 'ಜವೋಽಥಶೀಘ್ರಂ ತ್ವರಿತಂ' ಇತ್ಯಾದಿ ಸ್ಥಳದಲ್ಲಿ 'ತು', 'ಅಥ' ಹೇಳಿರುವುದರಿಂದ ಈ ಶಬ್ದಗಳು ಪೂರ್ವಶಬ್ದಗಳೊಡನೆ ಅನ್ವಯ ಹೊಂದುವುದಿಲ್ಲ ಮುಂದೆ ಇವುಗಳಿಗೆ ಸಂಬಂಧವೆಂದು ತಿಳಿಯಬೇಕು. ಹೀಗೆ ಈ ಸಂಜ್ಞೆಗಳನ್ನು ೩ ಕಾಂಡಗಳಲ್ಲಿ ಅಲ್ಲಲ್ಲಿ ಉಪಯೋಗಿಸಿರುವುದರಿಂದ ಲಿಂಗನಿರ್ಣಯಕ್ಕೋಸ್ಕರ ಇವುಗಳನ್ನು ಚನ್ನಾಗಿ ತಿಳಿದಿರಬೇಕೆಂದು ಮೊದಲು ವಿವರಿಸಿರುತ್ತಾನೆ.

# ಪ್ರಥಮ ಕಾಂಡ

## ಸ್ವರ್ಗವರ್ಗಃ ೧

ಸ್ವರವ್ಯಯಂ ಸ್ವರ್ಗನಾಕ ತ್ರಿದಿವ ತ್ರಿದಶಾಲಯಾಃ ।
ಸುರಲೋಕೋ ದ್ಯೋ ದಿವೌ ದ್ವೇ ಸ್ತ್ರಿಯಾಂ ಕ್ಲೀಬೇ ತ್ರಿವಿಷ್ಟಪಮ್[1] ॥
ಅಮರಾ ನಿರ್ಜರಾ ದೇವಾಸ್ತ್ರಿದಶಾ ವಿಭುಧಾಃ ಸುರಾಃ ।
ಸುಪರ್ವಾಣಃ ಸುಮನಸಸ್ತ್ರಿದಿವೇಶಾ ದಿವೌಕಸಃ ॥ ೭ ॥
ಆದಿತೇಯಾ ದಿವಿಷದೋ ಲೇಖಾ ಅದಿತಿನಂದನಾಃ ।
ಆದಿತ್ಯಾ ಋಭವೋಽಸ್ವಪ್ನಾ ಅಮರ್ತ್ಯಾ ಅಮೃತಾಂಧಸಃ ॥ ೮ ॥
ಬರ್ಹಿರ್ಮುಖಾಃ ಕ್ರತುಭುಜೋ ಗೀರ್ವಾಣಾ ದಾನವಾರಯಃ ।
ವೃಂದಾರಕಾ ದೈವತಾನಿ ಪುಂಸಿ ವಾ ದೇವತಾಃ ಸ್ತ್ರಿಯಾಮ್ ॥ ೯ ॥
ಆದಿತ್ಯವಿಶ್ವವಸವಸ್ತುಷಿತಾ ಭಾಸ್ವರಾನಿಲಾಃ ।
ಮಹಾರಾಜಿಕ ಸಾಧ್ಯಾಶ್ಚ ರುದ್ರಾಶ್ಚ ಗಣದೇವತಾಃ[2] ॥ ೧೦ ॥

---

ಸ್ವರ್ (ಸ್ವಃ) ಇದು ಅವ್ಯಯ. ಸ್ವರ್ಗಃ ನಾಕಃ ತ್ರಿದಿವಃ ತ್ರಿದಶಾಲಯಃ ಸುರಲೋಕಃ (ಪು) ದ್ಯೌಃ — ಓಕಾರಾಂತ ಸ್ತ್ರೀಲಿಂಗ. ದ್ಯೌಃ (ದಿವೌ–ದಿವಃ) ವಕಾರಾಂತ ಸ್ತ್ರೀಲಿಂಗ. ತ್ರಿವಿಷ್ಟಪಂ (ನಪುಂಸಕ) ಇವು ೯ ಸ್ವರ್ಗಲೋಕದ ಹೆಸರು. ॥ ೬ ॥

ಅಮರಾಃ ನಿರ್ಜರಾಃ ದೇವಾಃ ತ್ರಿದಶಾಃ ವಿಬುಧಾಃ ಸುರಾಃ ಸುಪರ್ವಾಣಃ (ಸುಪರ್ವನ್ ನಕಾರಾಂತ ಶಬ್ದ) ಸುಮನಸಃ (ಸಾಂತ) ತ್ರಿದಿವೇಶಾಃ ದಿವೌಕಸಃ (ಸಾಂತ) ಆದಿತೇಯಾಃ ದಿವಿಷದಃ (ದಾಂತ) ಲೇಖಾಃ ಅದಿತಿನಂದನಾಃ ಆದಿತ್ಯಾಃ ಋಭವಃ (ಉಕಾರಾಂತ) ಅಸ್ವಪ್ನಾಃ ಅಮರ್ತ್ಯಾಃ ಅಮೃತಾಂಧಸಃ (ಸಾಂತ) ಬರ್ಹಿರ್ಮುಖಾಃ ಕ್ರತುಭುಜಃ (ಜಾಂತ) ಗೀರ್ವಾಣಾಃ ದಾನವಾರಯಃ (ಇಕಾರಾಂತ) ವೃಂದಾರಕಾಃ ದೈವತಾನಿ (ಪು–ನ) ದೇವತಾಃ (ಸ್ತ್ರೀಲಿಂಗ) ೨೬ ದೇವತೆಗಳ ಹೆಸರು. ಈ ದೇವತಾಪರ್ಯಾಯ ಪದಗಳು ಹೆಚ್ಚಾಗಿ ಪ್ರಯೋಗದಲ್ಲಿ ಬಹುವಚನಾಂತವಾಗಿಯೇ ಉಪಯೋಗಿಸುವುದರಿಂದ ಎಲ್ಲವನ್ನೂ ಬಹುವಚನಾಂತ ವಾಗಿ ಹೇಳಿರುತ್ತಾನೆ. ॥ ೭ ॥ ೮ ॥ ೯ ॥

ಆದಿತ್ಯಾಃ ವಿಶ್ವೇ (ಅಕಾರಾಂತ ಸರ್ವನಾಮ ಶಬ್ದ) ವಸವಃ ತುಷಿತಾಃ ಭಾಸ್ವರಾಃ ಅನಿಲಾಃ ಮಹಾರಾಜಿಕಾಃ ಸಾಧ್ಯಾಃ ರುದ್ರಾಃ — ೯ ಗಣದೇವತೆ ಗಳು. ಇವರು ಗುಂಪಾಗಿರುತ್ತಾರೆ.

ನಿಷೇಧ ಮಾಡಿದಾಗ ಅದು ಪುಂನಪುಂಸಕಗಳುಳ್ಳದೆಂದು ತಿಳಿಯಬೇಕು. 'ನಗರೀ - ತ್ವಮರಾವತೀ' 'ಜವೋಽಥಶೀಘ್ರಂ ತ್ವರಿತಂ' ಇತ್ಯಾದಿ ಸ್ಥಳದಲ್ಲಿ 'ತು', 'ಅಥ' ಹೇಳಿರುವುದರಿಂದ ಈ ಶಬ್ದಗಳು ಪೂರ್ವಶಬ್ದಗಳೊಡನೆ ಅನ್ವಯ ಹೊಂದುವುದಿಲ್ಲ ಮುಂದೆ ಇವುಗಳಿಗೆ ಸಂಬಂಧವೆಂದು ತಿಳಿಯಬೇಕು. ಹೀಗೆ ಈ ಸಂಜ್ಞೆಗಳನ್ನು ೩ ಕಾಂಡಗಳಲ್ಲಿ ಅಲ್ಲಲ್ಲಿ ಉಪಯೋಗಿಸಿರುವುದರಿಂದ ಲಿಂಗನಿರ್ಣಯಕ್ಕೋಸ್ಕರ ಇವುಗಳನ್ನು ಚನ್ನಾಗಿ ತಿಳಿದಿರಬೇಕೆಂದು ಮೊದಲು ವಿವರಿಸಿರುತ್ತಾನೆ.

# ಪ್ರಥಮ ಕಾಂಡ

## .ಸ್ವರ್ಗವರ್ಗಃ ೧

ಸ್ವರವ್ಯಯಂ ಸ್ವರ್ಗನಾಕ ತ್ರಿದಿವ ತ್ರಿದಶಾಲಯಾಃ ।
ಸುರಲೋಕೋ ದ್ಯೋ ದಿವೌ ದ್ವೇ ಸ್ತ್ರಿಯಾಂ ಕ್ಲೀಬೇ ತ್ರಿವಿಷ್ಟಪಮ್[1] ॥
ಅಮರಾ ನಿರ್ಜರಾ ದೇವಾಸ್ತ್ರಿದಶಾ ವಿಭುಧಾಃ ಸುರಾಃ ।
ಸುಪರ್ವಾಣಃ ಸುಮನಸಸ್ತ್ರಿದಿವೇಶಾ ದಿವೌಕಸಃ ॥ ೭ ॥
ಆದಿತೇಯಾ ದಿವಿಷದೋ ಲೇಖಾ ಅದಿತಿನಂದನಾಃ ।
ಆದಿತ್ಯಾ ಋಭವೋಽಸ್ವಪ್ನಾ ಅಮರ್ತ್ಯಾ ಅಮೃತಾಂಧಸಃ ॥ ೮ ॥
ಬರ್ಹಿರ್ಮುಖಾಃ ಕ್ರತುಭುಜೋ ಗೀರ್ವಾಣಾ ದಾನವಾರಯಃ ।
ವೃಂದಾರಕಾ ದೈವತಾನಿ ಪುಂಸಿ ವಾ ದೇವತಾಃ ಸ್ತ್ರಿಯಾಮ್ ॥ ೯ ॥
ಆದಿತ್ಯವಿಶ್ವವಸವಸ್ತುಷಿತಾ ಭಾಸ್ವರಾನಿಲಾಃ ।
ಮಹಾರಾಜಿಕ ಸಾಧ್ಯಾಶ್ಚ ರುದ್ರಾಶ್ಚ ಗಣದೇವತಾಃ[2] ॥ ೧೦ ॥

---

ಸ್ವರ್ (ಸ್ವಃ) ಇದು ಅವ್ಯಯ. ಸ್ವರ್ಗಃ ನಾಕಃ ತ್ರಿದಿವಃ ತ್ರಿದಶಾಲಯಃ ಸುರಲೋಕಃ (ಪು) ದ್ಯೌಃ — ಓಕಾರಾಂತ ಸ್ತ್ರೀಲಿಂಗ. ದ್ಯೌಃ (ದಿವೌ–ದಿವಃ) ವಕಾರಾಂತ ಸ್ತ್ರೀಲಿಂಗ. ತ್ರಿವಿಷ್ಟಪಂ (ನಪುಂಸಕ) ಇವು ೯ ಸ್ವರ್ಗಲೋಕದ ಹೆಸರು. ॥ ೬ ॥

ಅಮರಾಃ ನಿರ್ಜರಾಃ ದೇವಾಃ ತ್ರಿದಶಾಃ ವಿಬುಧಾಃ ಸುರಾಃ ಸುಪರ್ವಾಣಃ (ಸುಪರ್ವನ್ ನಕಾರಾಂತ ಶಬ್ದ) ಸುಮನಸಃ (ಸಾಂತ) ತ್ರಿದಿವೇಶಾಃ ದಿವೌಕಸಃ (ಸಾಂತ) ಆದಿತೇಯಾಃ ದಿವಿಷದಃ (ದಾಂತ) ಲೇಖಾಃ ಅದಿತಿನಂದನಾಃ ಆದಿತ್ಯಾಃ ಋಭವಃ (ಉಕಾರಾಂತ) ಅಸ್ವಪ್ನಾಃ ಅಮರ್ತ್ಯಾಃ ಅಮೃತಾಂಧಸಃ (ಸಾಂತ) ಬರ್ಹಿರ್ಮುಖಾಃ ಕ್ರತುಭುಜಃ (ಜಾಂತ) ಗೀರ್ವಾಣಾಃ ದಾನವಾರಯಃ (ಇಕಾರಾಂತ) ವೃಂದಾರಕಾಃ ದೈವತಾನಿ (ಪು–ನ) ದೇವತಾಃ (ಸ್ತ್ರೀಲಿಂಗ) ೨೬ ದೇವತೆಗಳ ಹೆಸರು. ಈ ದೇವತಾಪರ್ಯಾಯ ಪದಗಳು ಹೆಚ್ಚಾಗಿ ಪ್ರಯೋಗದಲ್ಲಿ ಬಹುವಚನಾಂತವಾಗಿಯೇ ಉಪಯೋಗಿಸುವುದರಿಂದ ಎಲ್ಲವನ್ನೂ ಬಹುವಚನಾಂತ ವಾಗಿ ಹೇಳಿರುತ್ತಾನೆ. ॥ ೭ ॥ ೮ ॥ ೯ ॥

ಆದಿತ್ಯಾಃ ವಿಶ್ವೇ (ಅಕಾರಾಂತ ಸರ್ವನಾಮ ಶಬ್ದ) ವಸವಃ ತುಷಿತಾಃ ಭಾಸ್ವರಾಃ ಅನಿಲಾಃ ಮಹಾರಾಜಿಕಾಃ ಸಾಧ್ಯಾಃ ರುದ್ರಾಃ — ೯ ಗಣದೇವತೆ ಗಳು. ಇವರು ಗುಂಪಾಗಿರುತ್ತಾರೆ.

ವಿದ್ಯಾಧರೋಽಪ್ಸರೋ ಯಕ್ಷ ರಕ್ಷೋ ಗಂಧರ್ವ ಕಿಂನರಾಃ ।
ಪಿಶಾಚೋ ಗುಹ್ಯಕ ಸಿದ್ಧೋ ಭೂತೋಽಮೀ ದೇವಯೋನಯಃ ॥ ೧೧ ॥
ಅಸುರಾ ದೈತ್ಯ ದೈತೇಯ ದನುಜೇಂದ್ರಾರಿ ದಾನವಾಃ ।
ಶುಕ್ರಶಿಷ್ಯಾ ದಿತಿಸುತಾಃ ಪೂರ್ವದೇವಾಃ ಸುರದ್ವಿಷಃ ॥ ೧೨ ॥
ಸರ್ವಜ್ಞಃ ಸುಗತೋ ಬುದ್ಧೋ ಧರ್ಮರಾಜಸ್ತಥಾಗತಃ ।
ಸಮಂತಭದ್ರೋ ಭಗವಾನ್ಮಾರಜಿಲ್ಲೋಕಜಿಜ್ಜಿನಃ ॥ ೧೩ ॥
ಷಡಭಿಜ್ಞೋ ದಶಬಲೋಽದ್ವಯವಾದೀ ವಿನಾಯಕಃ ।
ಮುನೀಂದ್ರಃ ಶ್ರೀಘನಃ ಶಾಸ್ತಾ ಮುನಿಃ ಶಾಕ್ಯಮುನಿಸ್ತು ಯಃ ॥ ೧೪ ॥
ಸ ಶಾಕ್ಯಸಿಂಹಃ ಸರ್ವಾರ್ಥಸಿದ್ಧಃ ಶೌದ್ಧೋದನಿಶ್ಚ ಯಃ (ಸಃ)
ಗೌತಮಶ್ಚಾರ್ಕಬಂಧುಶ್ಚ ಮಾಯಾದೇವೀಸುತಶ್ಚ ಸಃ ॥ ೧೫ ॥
ಬ್ರಹ್ಮಾತ್ಮಭೂಃ ಸುರಜ್ಯೇಷ್ಠಃ ಪರಮೇಷ್ಠೀ ಪಿತಾಮಹಃ ।
ಹಿರಣ್ಯಗರ್ಭೋ ಲೋಕೇಶಃ ಸ್ವಯಂಭೂಶ್ಚತುರಾನನಃ ॥ ೧೬ ॥

---

ವಿದ್ಯಾಧರಃ ಅಪ್ಸರಾಃ (ಸಾಂತ) ಯಕ್ಷಃ ರಕ್ಷಃ (ಸಾಂತನಪುಂಸಕ) ಗಂಧರ್ವಃ ಕಿಂನರಃ ಪಿಶಾಚಃ ಗುಹ್ಯಕಃ ಸಿದ್ಧಃ ಭೂತಃ — ೧೦ — ಇವರು ದೇವಾಂಶವುಳ್ಳವರು. ಅಸುರಾಃ ದೈತ್ಯಾಃ ದೈತೇಯಾಃ ದನುಜಾಃ ಇಂದ್ರಾರಯಃ (ಇಕಾರಾಂತ) ದಾನವಾಃ ಶುಕ್ರಶಿಷ್ಯಾಃ ದಿತಿಸುತಾಃ ಪೂರ್ವ ದೇವಾಃ ಸುರದ್ವಿಷಃ (ಷಾಂತ) — ೧೦ ದೇವವಿರೋಧಿಗಳಾದ ರಾಕ್ಷಸರು. ದಿತಿಯ ಮಕ್ಕಳಾದ ಅಸುರರು. ॥ ೧೧ ॥ ॥ ೧೨ ॥

ಸರ್ವಜ್ಞಃ ಸುಗತಃ ಬುದ್ಧಃ ಧರ್ಮರಾಜಃ ತಥಾಗತಃ ಸಮಂತ ಭದ್ರಃ ಭಗವಾನ್ (ಭಗವತ್ — ತಾಂತ) ಮಾರಜಿತ್, (ತಾಂತ) ಲೋಕಜಿತ್ (ತಾಂತ) ಜಿನಃ ಷಡಭಿಜ್ಞಃ ದಶಬಲಃ ಅದ್ವಯವಾದೀ (ನಾಂತ) ವಿನಾಯಕಃ ಮುನೀಂದ್ರಃ ಶ್ರೀಘನಃ ಶಾಸ್ತಾ (ಋಕಾರಾಂತ) ಮುನಿಃ — ೧೮ ಬುದ್ಧ ದೇವನ ಹೆಸರು. ಶಾಕ್ಯಮುನಿಃ ಶಾಕ್ಯಸಿಂಹಃ ಸರ್ವಾರ್ಥಸಿದ್ಧಃ ಶೌದ್ಧೋ ದನಿಃ ಗೌತಮಃ ಅರ್ಕಬಂಧುಃ ಮಾಯಾದೇವೀಸುತಃ — ೭ ಶಾಕ್ಯರಿಗೆ ಗುರುವಾದ ಜಿನದೇವನು; ಬುದ್ಧದೇವ. ಇವರು ಅವೈದಿಕರಾದುದರಿಂದ ಅಸುರರು ಆದ ಮೇಲೆ ಹೇಳಿರುತ್ತಾನೆ. ॥ ೧೩ ॥ ೧೪ ॥ ೧೫ ॥

ಬ್ರಹ್ಮಾ (ನಾಂತ) ಆತ್ಮಭೂಃ (ಊಕಾರಾಂತ) ಸುರಜ್ಯೇಷ್ಠಃ ಪರಮೇಷ್ಠೀ (ನಾಂತ) ಪಿತಾಮಹಃ ಹಿರಣ್ಯಗರ್ಭಃ ಲೋಕೇಶಃ ಸ್ವಯಂಭೂಃ ಚತುರಾನನಃ ಧಾತಾ (ಋಕಾರಾಂತ) ಅಬ್ಜಯೋನಿಃ ದ್ರುಹಿಣಃ ವಿರಿಂಚಿಃ ಕಮಲಾಸನಃ

ಧಾತಾಬ್ಜ ಯೋನಿರ್ದ್ರುಹಿಣೋ ವಿರಿಂಚಿಃ ಕಮಲಾಸನಃ ।
ಸ್ರಷ್ಟಾ ಪ್ರಜಾಪತಿರ್ವೇಧಾ ವಿಧಾತಾ ವಿಶ್ವಸೃಡ್ವಿಧಿಃ ॥ ೧೭ ॥
ಶತಾನಂದಃ ಶತಧೃತಿಃ ವಿರಿಂಜೋಽಜೋ ವಿರಿಂಚಿನಃ ।
ವಿಷ್ಣುರ್ನಾರಾಯಣಃ ಕೃಷ್ಣೋ ವೈಕುಂಠೋ ವಿಷ್ಟರಶ್ರವಾಃ ॥
ದಾಮೋದರೋ ಹೃಷೀಕೇಶಃ ಕೇಶವೋ ಮಾಧವಃ ಸ್ವಭೂಃ ॥ ೧೮ ॥
ದೈತ್ಯಾರಿಃ ಪುಂಡರೀಕಾಕ್ಷೋ ಗೋವಿಂದೋ ಗರುಡಧ್ವಜಃ ।
ಪೀತಾಂಬರೋಽಚ್ಯುತಃ ಶಾರ್ಙ್ಗೀ ವಿಷ್ವಕ್ಸೇನೋ ಜನಾರ್ದನಃ ॥ ೧೯ ॥
ಉಪೇಂದ್ರ ಇಂದ್ರಾವರಜಶ್ಚಕ್ರಪಾಣಿಶ್ಚತುರ್ಭುಜಃ ।
ಪದ್ಮನಾಭೋ ಮಧುರಿಪುರ್ವಾಸುದೇವಸ್ತ್ರಿವಿಕ್ರಮಃ ॥ ೨೦ ॥
ದೇವಕೀನಂದನಃ ಶೌರಿಃ ಶ್ರೀಪತಿಃ ಪುರುಷೋತ್ತಮಃ ।
ವನಮಾಲೀ ಬಲಿಧ್ವಂಸೀ ಕಂಸಾರಾತಿರಧೋಕ್ಷಜಃ ॥ ೨೧ ॥
ವಿಶ್ವಂಭರಃ ಕೈಟಭಜಿದ್ವಿಧುಃ ಶ್ರೀವತ್ಸಲಾಂಛನಃ ।
(ಗದಾಗ್ರಜೋ ಮುಂಜಿಕೇಶೋ ದಾಶಾರ್ಹೋ ದಶರೂಪಭೃತ್) ।
ವಸುದೇವೋಽಸ್ಯ ಜನಕಃ ಸ ಏವಾನಕದುಂದುಭಿಃ ॥ ೨೨ ॥

---

ಸ್ರಷ್ಟಾ (ಋಕಾರಾಂತ) ಪ್ರಜಾಪತಿಃ ವೇಧಾಃ (ಸಾಂತ) ವಿಧಾತಾ (ಋಕಾರಾಂತ) ವಿಶ್ವಸೃಟ್ (ಜಾಂತ) ವಿಧಿಃ — ೨೦ ಬ್ರಹ್ಮನ ಹೆಸರು. ಶತಾನಂದಃ ಶತದೃತಿಃ ವಿರಿಂಚಃ ಅಜಃ ವಿರಿಂಚಿನಃ ಎಂದು ಅಧಿಕವಾಗಿ ಹೇಳುತ್ತಾರೆ. ॥ ೧೬ ॥ ॥ ೧೭ ॥

ವಿಷ್ಣುಃ ನಾರಾಯಣಃ ಕೃಷ್ಣಃ ವೈಕುಂಠಃ ವಿಷ್ಟರಶ್ರವಾಃ (ಸಾಂತ ವೇದಸ್ ಶಬ್ದದಂತೆ) ದಾಮೋದರಃ ಹೃಷೀಕೇಶಃ ಕೇಶವಃ ಮಾಧವಃ ಸ್ವಭೂಃ (ಊಕಾರಾಂತ) ದೈತ್ಯಾರಿಃ ಪುಂಡರೀಕಾಕ್ಷಃ ಗೋವಿಂದಃ ಗರುಡಧ್ವಜಃ ಪೀತಾಂಬರಃ ಅಚ್ಯುತಃ ಶಾರ್ಙ್ಗೀ (ನಾಂತ, ಗುಣಿನ್ ಶಬ್ದದಂತೆ) ವಿಷ್ವಕ್ಸೇನಃ ಜನಾರ್ದನಃ ಉಪೇಂದ್ರಃ ಇಂದ್ರಾವರಜಃ ಚಕ್ರಪಾಣಿಃ ಚತುರ್ಭುಜಃ ಪದ್ಮನಾಭಃ ಮಧುರಿಪುಃ ವಾಸುದೇವಃ ತ್ರಿವಿಕ್ರಮಃ ದೇವಕೀನಂದನಃ ಶೌರಿಃ ಶ್ರೀಪತಿಃ ಪುರುಷೋತ್ತಮಃ ವನಮಾಲೀ (ನಾಂತ) ಬಲಿಧ್ವಂಸೀ (ನಾಂತ) ಕಂಸಾರಾತಿಃ ಅಧೋಕ್ಷಜಃ ವಿಶ್ವಂಭರಃ ಕೈಟಭಜಿತ್ (ತಾಂತ) ಶ್ರೀವತ್ಸಲಾಂಛನಃ — ೩೯ ವಿಷ್ಣುವಿನ ಹೆಸರು. ಗದಾಗ್ರಜಃ ಮುಂಜಿಕೇಶಃ ದಾಶಾರ್ಹಃ ದಶರೂಪಭೃತ್ — ಇತ್ಯಾದಿ ಅಧಿಕಪಾಠ.
॥ ೧೮ ॥ ॥ ೧೯ ॥ ॥ ೨೦ ॥ ॥ ೨೧ ॥

ಬಲಭದ್ರಃ ಪ್ರಲಂಬಘ್ನೋ ಬಲದೇವೋಽಚ್ಯುತಾಗ್ರಜಃ ।
ರೇವತೀರಮಣೋ ರಾಮಃ ಕಾಮಪಾಲೋ ಹಲಾಯುಧಃ ॥ ೨೩ ॥
ನೀಲಾಂಬರೋ ರೌಹಿಣೇಯಸ್ತಾಲಾಂಕೋ ಮುಸಲೀ ಹಲೀ ।
ಸಂಕರ್ಷಣಃ ಸೀರಪಾಣಿಃ ಕಾಲಿಂದೀಭೇದನೋ ಬಲಃ ॥ ೨೪ ॥
ಮದನೋ ಮನ್ಮಥೋ ಮಾರಃ ಪ್ರದ್ಯುಮ್ನೋ ಮೀನಕೇತನಃ ।
ಕಂದರ್ಪೋ ದರ್ಪಕೋಽನಂಗಃ ಕಾಮಃ ಪಂಚಶರಃ ಸ್ಮರಃ ॥ ೨೫ ॥
ಶಂ (ಸಂ) ಬರಾರಿರ್ಮನಸಿಜಃ ಕುಸುಮೇಷುರನನ್ಯಜಃ ।
ಪುಷ್ಪಧನ್ವಾ ರತಿಪತಿರ್ಮಕರಧ್ವಜ ಆತ್ಮಭೂಃ ॥ ೨೬ ॥
(ಶೃಂಗಾರಯೋನಿಃ ಶ್ರೀಪುತ್ರಶ್ಶೂರ್ಪಕಾರಾತಿರಿತ್ಯಪಿ)
ಬ್ರಹ್ಮಸೂರ್ವಿಶ್ವಕೇತುಃ ಸ್ಯಾತ್ ಅನಿರುದ್ಧ ಉಷಾಪತಿಃ ।
(ಅರವಿಂದಮಶೋಕಂಚ ಚೂತಂ ಚ ನವಮಲ್ಲಿಕಾ ।
ನೀಲೋತ್ಪಲಂ ಚ ಪಂಚೈತೇ ಪಂಚಬಾಣಸ್ಯ ಸಾಯಕಾಃ )
ಲಕ್ಷ್ಮೀಃ ಪದ್ಮಾಲಯಾ ಪದ್ಮಾ ಕಮಲಾ ಶ್ರೀರ್ಹರಿಪ್ರಿಯಾ ॥ ೨೭ ॥
(ಇಂದಿರಾ ಲೋಕಮಾತಾ ಮಾ ರಮಾ ಮಂಗಳದೇವತಾ)

---

ವಸುದೇವಃ ಆನಕದುಂದುಭಿಃ — ೨ ಕೃಷ್ಣರೂಪಿಯಾದ ವಿಷ್ಣುವಿನ ತಂದೆಯ ಹೆಸರು. ॥ ೨೨ ॥

ಬಲಭದ್ರಃ ಪ್ರಲಂಭಘ್ನಃ ಬಲದೇವಃ ಅಚ್ಯುತಾಗ್ರಜಃ ರೇವತಿಃ ರಮಣಃ ರಾಮಃ ಕಾಮಪಾಲಃ ಹಲಾಯುಧಃ ನೀಲಾಂಬಃ ರೌಹಿಣೇಯಃ ತಾಲಾಂಕಃ ಮುಸಲಿಃ ಹಲಿಃ (ನಕಾರಾಂತ) ಸಂಕರ್ಷಣಃ ಸೀರಪಾಣಿಃ ಕಾಲಿಂದೀಭೇದನಃ ಬಲಃ — ೧೭ ಬಲರಾಮನ ಹೆಸರು ॥ ೨೩ ॥ ೨೪ ॥

ಮದನಃ ಮನ್ಮಥಃ ಮಾರಃ ಪ್ರದ್ಯುಮ್ನಃ ಮೀನಕೇತನಃ ಕಂದರ್ಪಃ ದರ್ಪಕಃ ಅನಂಗಃ ಕಾಮಃ ಪಂಚಶರಃ ಸ್ಮರಃ ಶಂಬರಾರಿಃ ಮನಸಿಜಃ ಕುಸುಮೇಷುಃ ಅನನ್ಯಜಃ ಪುಷ್ಪಧನ್ವಾ (ಪುಷ್ಪಧನ್ವನ್ — ನಾಂತ) ರತಿಪತಿಃ ಮಕರಧ್ವಜಃ ಆತ್ಮಭೂಃ (ಊಕಾರಾಂತ) ಬ್ರಹ್ಮಸೂಃ ವಿಶ್ವಕೇತುಃ — ೨೧ ಮನ್ಮಥನ ಹೆಸರು. ಅನಿರುದ್ಧಃ ಉಷಾಪತಿಃ — ೨ ಮನ್ಮಥನ ಮಗ ಅನಿರುದ್ಧನ ಹೆಸರು ಶೃಂಗಾರಯೋನಿಃ ಶ್ರೀಪುತ್ರಃ ಶೂರ್ಪಕಾರಾತಿಃ — ೩ ಮನ್ಮಥನಿಗೆ ಅಧಿಕವಾಗಿ ಹೇಳುತ್ತಾರೆ. ಅರವಿಂದಂ ಅಶೋಕಂ ಚೂತಂ ನವಮಲ್ಲಿಕಾ ನೀಲೋತ್ಪಲಂ — ಈ ಐದು ಮನ್ಮಥನ ಬಾಣಗಳು. ಇವು ಅಧಿಕಪಾಠ. ಲಕ್ಷ್ಮೀಃ ಪದ್ಮಾಲಯಾ ಪದ್ಮಾ ಕಮಲಾ ಶ್ರೀಃ ಹರಿಪ್ರಿಯಾ — ೬ ಲಕ್ಷ್ಮಿಯ ಹೆಸರು. ॥ ೨೫ ॥ ೨೬ ॥ ೨೭ ॥

ಶಂಖೋ ಲಕ್ಷ್ಮೀಪತೇಃ ಪಾಂಚಜನ್ಯಶ್ಚಕ್ರಂ ಸುದರ್ಶನಮ್ ।
ಕೌಮೋದಕೀ ಗದಾ ಖಡ್ಗೋ ನಂದಕಃ ಕೌಸ್ತುಭೋ ಮಣಿಃ ॥ ೨೮ ॥
(ಚಾಪಃ ಶಾರ್ಙ್ಗಂ ಮುರಾರೇಸ್ತು ಶ್ರೀವತ್ಸೋ ಲಾಂಛನಂ ಮತಮ್)
ಗರುತ್ಮಾನ್ ಗರುಡಸ್ತಾರ್ಕ್ಷ್ಯೋ ವೈನತೇಯಃ ಖಗೇಶ್ವರಃ ।
ನಾಗಾಂತಕೋ ವಿಷ್ಣುರಥಃ ಸುಪರ್ಣಃ ಪನ್ನಗಾಶನಃ ॥ ೨೯ ॥
ಶಂಭುರೀಶಃ ಪಶುಪತಿಃ ಶಿವಃ ಶೂಲೀ ಮಹೇಶ್ವರಃ ।
ಈಶ್ವರಃ ಶರ್ವ ಈಶಾನಃ ಶಂಕರಶ್ಚಂದ್ರಶೇಖರಃ ॥ ೩೦ ॥
ಭೂತೇಶಃ ಖಂಡಪರಶುರ್ಗಿರೀಶೋ ಗಿರಿಶೋ ಮೃಡಃ ।
ಮೃತ್ಯುಂಜಯಃ ಕೃತ್ತಿವಾಸಾಃ ಪಿನಾಕೀ ಪ್ರಮಥಾಧಿಪಃ ॥ ೩೧ ॥
ಉಗ್ರಃಕಪರ್ದೀ ಶ್ರೀಕಂಠಃ ಶಿತಿಕಂಠಃ ಕಪಾಲಭೃತ್ ।
ವಾಮದೇವೋ ಮಹಾದೇವೋ ವಿರೂಪಾಕ್ಷಸ್ತ್ರಿಲೋಚನಃ ॥ ೩೨ ॥
ಕೃಶಾನುರೇತಾಃ ಸರ್ವಜ್ಞೋ ಧೂರ್ಜಟಿರ್ನೀಲಲೋಹಿತಃ ।
ಹರಃ ಸ್ಮರಹರೋ ಭರ್ಗಸ್ತ್ರ್ಯಂಬಕಸ್ತ್ರಿಪುರಾಂತಕಃ ॥ ೩೩ ॥
ಗಂಗಾಧರೋಽಂಧಕರಿಪುಃಕ್ರತುಧ್ವಂಸೀ ವೃಷಧ್ವಜಃ ।
ವ್ಯೋಮಕೇಶೋ ಭವೋ ಭೀಮಃ ಸ್ಥಾಣೂ ರುದ್ರ ಉಮಾಪತಿಃ ॥ ೩೪ ॥

---

ಪಾಂಚಜನ್ಯಃ—ವಿಷ್ಣುವಿನ ಶಂಖದ ಹೆಸರು. ಸುದರ್ಶನಂ—(ಪುಂ ನ) ಅವನ ಚಕ್ರ, ಕೌಮೋದಕೀ (ಸ್ತ್ರೀ) ಅವನ ಗದೆ, ನಂದಕಃ—ಅವನ ಖಡ್ಗ, ಕೌಸ್ತುಭಃ ವಿಷ್ಣುವು ಎದೆಯಲ್ಲಿ ಧರಿಸಿದ ಮಣಿಯ ಹೆಸರು, ಶಾರ್ಙ್ಗಂ (ನ) ಅವನ ಬಿಲ್ಲು, ಶ್ರೀವತ್ಸಃ— ಅವನ ಸೌಭಾಗ್ಯಚಿಹ್ನೆ. ಗರುತ್ಮಾನ್ (ಗರುತ್ಮತ್ ಶಬ್ದ–ಶಾಂತ) ಗರುಡಃ ತಾರ್ಕ್ಷ್ಯಃ ವೈನತೇಯಃ ಖಗೇಶ್ವರಃ ನಾಗಾಂತಕಃ ವಿಷ್ಣುರಥಃ ಸುಪರ್ಣಃ ಪನ್ನಗಾಶನಃ—೯ ವಿಷ್ಣುವಿನ ವಾಹನವಾದ ಗರುಡನ ಹೆಸರು.

ಶಂಭುಃ ಈಶಃ ಪಶುಪತಿಃ ಶಿವಃ ಶೂಲೀ (ನಾಂತ) ಮಹೇಶ್ವರಃ ಈಶ್ವರಃ ಶರ್ವಃ ಈಶಾನಃ ಶಂಕರಃ ಚಂದ್ರಶೇಖರಃ ಭೂತೇಶಃ ಖಂಡ ಪರಶುಃ ಗಿರೀಶಃ ಗಿರಿಶಃ ಮೃಡಃ ಮೃತ್ಯುಂಜಯಃ ಕೃತ್ತಿವಾಸಾಃ (ಸಾಂತ) ಪಿನಾಕೀ (ನಾಂತ) ಪ್ರಮಥಾಧಿಪಃ ಉಗ್ರಃ ಕಪರ್ದೀ (ನಾಂತ) ಶ್ರೀಕಂಠಃ ಶಿತಿಕಂಠಃ ಕಪಾಲಭೃತ್ (ತಾಂತ) ವಾಮದೇವಃ ಮಹಾದೇವಃ ವಿರೂಪಾಕ್ಷಃ ತ್ರಿಲೋಚನಃ ಕೃಶಾನುರೇತಾಃ (ಸಾಂತ) ಸರ್ವಜ್ಞಃ ಧೂರ್ಜಟಿಃ ನೀಲ ಲೋಹಿತಃ ಹರಃ ಸ್ಮರಹರಃ ಭರ್ಗಃ ತ್ರ್ಯಂಬಕಃ ತ್ರಿಪುರಾಂತಕಃ ಗಂಗಾ ಧರಃ ಅಂಧಕರಿಪುಃ ಕ್ರತುಧ್ವಂಸೀ (ನಾಂತ) ವೃಷಧ್ವಜಃ ವ್ಯೋಮಕೇಶಃ

(ಅಷ್ಟಮೂರ್ತಿರಹಿರ್ಬುಧ್ನ್ಯೋ ಮಹಾಕಾಲೋ ಮಹಾನಟಃ।
ಕಟಾಟಂಕಃ ಕಂಕಟಕಃ ಕಟಪೂಃ ಪರಮೇಶ್ವರಃ ।
ಲಿಂಗಮೂರ್ತಿರ್ಜಟಾಟೀರೋ ಜಟಾಂಟೀರೋಽಗ್ನಿಲೋಚನಃ)
ಕಪರ್ದೋಽಸ್ಯ ಜಟಾಜೂಟಃ ಪಿನಾಕೋಽಜಗವಂ ಧನುಃ ।
ಪ್ರಮಥಾಃ ಸ್ಯುಃ ಪಾರಿಷದಾಃ ಬ್ರಾಹ್ಮೀತ್ಯಾದ್ಯಾಸ್ತು ಮಾತರಃ ॥ ೩೫ ॥
(ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ।
ವಾರಾಹೀ ಚೈವ ಚೇಂದ್ರಾಣೀ ಚಾಮುಂಡಾ ಸಪ್ತಮಾತರಃ ।
ವಿಭೂತಿರ್ಭೂತಿರೈಶ್ವರ್ಯಮಣಿಮಾದಿಕಮಷ್ಟಧಾ ।
ಅಣಿಮಾ ಮಹಿಮಾ ಚೈವ ಲಘಿಮಾ ಗರಿಮಾ ತಥಾ ।
ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟಭೂತಯಃ)।
ಉಮಾ ಕಾತ್ಯಾಯನೀ ಗೌರೀ ಕಾಳೀ ಹೈಮವತೀಶ್ವರೀ ॥ ೩೬ ॥
ಶಿವಾ ಭವಾನೀ ರುದ್ರಾಣೀ ಶರ್ವಾಣೀ ಸರ್ವಮಂಗಳಾ ।
ಅಪರ್ಣಾ ಪಾರ್ವತೀ ದುರ್ಗಾ ಮೃಡಾಣೀ ಚಂಡಿಕಾಂಬಿಕಾ ॥ ೩೭ ॥
(ಆರ್ಯಾ ದಾಕ್ಷಾಯಣೀ ಚೈವ ಗಿರಿಜಾ ಮೇನಕಾತ್ಮಜಾ
ವಿನಾಯಕೋ ವಿಘ್ನರಾಜದ್ವೈಮಾತುರಗಣಾಧಿಪಾಃ ।
ಅಪ್ಯೇಕದಂತ ಹೇರಂಬ ಲಂಬೋದರ ಗಜಾನನಾಃ ॥ ೩೮ ॥

---

ಭವಃ ಭೀಮಃ ಸ್ಥಾಣುಃ ರುದ್ರಃ ಉಮಾಪತಿಃ — ೪೮ ಶಿವನ ಹೆಸರು. ಅಷ್ಟಮೂರ್ತಿಃ ಅಹಿರ್ಬುಧ್ನ್ಯಃ ಮಹಾಕಾಲಃ ಮಹಾನಟಃ ಕಟಾಟಂಕಃ ಕಂಕಟಕಃ ಕಟಪೂಃ ಪರಮೇಶ್ವರಃ ಲಿಂಗಮೂರ್ತಿಃ ಜಟಾಟೀರಃ ಜಟಾಂಟೀರಃ ಅಗ್ನಿಲೋಚನಃ—೧೨ ಅಧಿಕವಾಗಿ ಹೇಳುತ್ತಾರೆ. ॥೩೪॥

ಕಪರ್ದಃ — ಶಿವನ ಜಡೆಮುಡಿ. ಪಿನಾಕಃ, ಅಜಗವಂ (ನ) — ಶಿವನ ಬಿಲ್ಲು. ಪ್ರಮಥಾಃ — ಶಿವನ ಸಮೀಪದಲ್ಲಿರುವ ನಂದಿ ಮುಂತಾದ ಗಣಗಳ ಹೆಸರು ಬ್ರಾಹ್ಮೀ ಮಾಹೇಶ್ವರೀ ಕೌಮಾರೀ ವೈಷ್ಣವೀ ವಾರಾಹೀ ಇಂದ್ರಾಣೀ ಚಾಮುಂಡಾ — ಸಪ್ತಮಾತೃಕೆಯರ ಹೆಸರು. ವಿಭೂತಿಃ ಭೂತಿಃ ಐಶ್ವರ್ಯಂ— ಐಶ್ವರ್ಯದ ಹೆಸರು. ಅಣಿಮಾ ಮಹಿಮಾ ಲಘಿಮಾ ಗರಿಮಾ ಪ್ರಾಪ್ತಿಃ ಪ್ರಾಕಾಮ್ಯಂ ಈಶತ್ವಂ ವಶಿತ್ವಂ — ಎಂಟು ವಿಧಗಳಾದ ಸಿದ್ಧಿಗಳ ಹೆಸರು.

ಉಮಾ ಕಾತ್ಯಾಯನೀ ಗೌರೀ ಕಾಳೀ ಹೈಮವತೀ ಈಶ್ವರೀ ಶಿವಾ ಭವಾನೀ ರುದ್ರಾಣೀ ಶರ್ವಾಣೀ ಸರ್ವಮಂಗಳಾ ಅಪರ್ಣಾ ಪಾರ್ವತೀ ದುರ್ಗಾ ಮೃಡಾಣೀ ಚಂಡಿಕಾ ಅಂಬಿಕಾ — ೧೭ ಪಾರ್ವತಿಯ ಹೆಸರು. ವಿನಾಯಕಃ ವಿಘ್ನರಾಜಃ ದ್ವೈಮಾತುರಃ ಗಣಾಧಿಪಃ ಏಕದಂತಃ

ಕಾರ್ತಿಕೇಯೋ ಮಹಾಸೇನಃ ಶರಜನ್ಮಾ ಷಡಾನನಃ ।
ಪಾರ್ವತೀನಂದನಃ ಸ್ಕಂದಃ ಸೇನಾನೀರಗ್ನಿಭೂರ್ಗುಹಃ ॥ ೩೯ ॥
ಬಾಹುಲೇಯಸ್ತಾರಕಜಿದ್ವಿಶಾಖಃ ಶಿಖಿವಾಹನಃ ।
ಷಾಣ್ಮಾತುರಃ ಶಕ್ತಿಧರಃ ಕುಮಾರಃ ಕ್ರೌಂಚದಾರಣಃ ॥ ೪೦ ॥
(ಭೃಂಗೀ ಭೃಂಗೀರಿಟಸ್ತುಂಡುಃ ಶೈಲಾದಿರ್ನಂದಿಕೇಶ್ವರಃ)
ಇಂದ್ರೋ ಮರುತ್ವಾನ್ಮಘವಾ ಬಿಡೌಜಾಃ ಪಾಕಶಾಸನಃ ।
ವೃದ್ಧಶ್ರವಾಃಶು (ಸು) ನಾಸೀರಃ ಪುರುಹೂತಃ ಪುರಂದರ ॥ ೪೧ ॥
ಜಿಷ್ಣುರ್ಲೇಖರ್ಷಭಃ ಶಕ್ರಃ ಶತಮನ್ಯುರ್ದಿವಸ್ಪತಿಃ ।
ಸುತ್ರಾಮಾ ಗೋತ್ರಭಿದ್ವಜ್ರೀ ವಾಸವೋ ವೃತ್ರಹಾ ವೃಷಾ ॥ ೪೨ ॥
ವಾಸ್ತೋಷ್ಪತಿಃ ಸುರಪತಿರ್ಬಲಾರಾತಿಃ ಶಚೀಪತಿಃ ।
ಜಂಭಭೇದೀ ಹರಿಹಯಃ ಸ್ವಾರಾಣ್ನಮುಚಿಸೂದನಃ ॥ ೪೩ ॥
ಸಂಕ್ರಂದನೋ ದುಶ್ಚ್ಯವನಸ್ತುರಾಷಾಣ್ಮೇಘವಾಹನಃ ।
ಆಖಂಡಲಃ ಸಹಸ್ರಾಕ್ಷಃ ಋಭುಕ್ಷಾಸ್ತಸ್ಯ ತು ಪ್ರಿಯಾ ॥ ೪೪ ॥

---

ಹೇರಂಬಃ ಲಂಬೋದರಃ ಗಜಾನನಃ — ೮ ಗಣಪತಿಯ ಹೆಸರು. ಕಾರ್ತಿಕೇಯಃ ಮಹಾಸೇನಃ ಶರಜನ್ಮಾ (ಶರಜನ್ಮನ್ — ನಾಂತ) ಷಡಾನನಃ ಪಾರ್ವತೀನಂದನಃ ಸ್ಕಂದಃ ಸೇನಾನೀಃ (ಈ ಕಾರಾಂತ) ಅಗ್ನಿಭೂಃ (ಊಕಾರಾಂತ) ಗುಹಃ ಬಾಹುಲೇಯಃ ತಾರಕಜಿತ್ ವಿಶಾಖಃ ಶಿಖಿವಾಹನಃ ಷಾಣ್ಮಾತುರಃ ಶಕ್ತಿಧರಃ ಕುಮಾರಃ ಕ್ರೌಂಚದಾರುಣಃ — ೧೭ ಶಿವಪುತ್ರನಾದ ಷಣ್ಮುಖನ ಹೆಸರು. ಭೃಂಗೀ ಭೃಂಗೀರಿಟಃ ತಂಡುಃ ಶೈಲಾದಿಃ ನಂದಿಕೇಶ್ವರಃ—ಶಿವನ ವಾಹನವಾದ ನಂದಿಯ ಹೆಸರು. ಅಧಿಕಪಾಠ ॥೪೦॥

ಇಂದ್ರಃ ಮರುತ್ವಾನ್ (ಮರುತ್ವತ್ — ತಾಂತ) ಮಘವಾ (ಮಘವನ್ — ನಾಂತ) ಬಿಡೌಜಾಃ (ಬಿಡೌಜಸ್ — ಸಾಂತ) ಪಾಕಶಾಸನಃ ವೃದ್ಧಶ್ರವಾಃ (ವೃದ್ಧಶ್ರವಸ್ — ಸಾಂತ) ಶುನಾಸೀರಃ ಪುರುಹೂತಃ ಪುರಂದರಃ ಜಿಷ್ಣುಃ ಲೇಖರ್ಷಭಃ ಶಕ್ರಃ ಶತಮನ್ಯುಃ ದಿವಸ್ಪತಿಃ ಸುತ್ರಾಮಾ (ಸುತ್ರಾಮನ್) ಗೋತ್ರಭಿತ್ (ದಾಂತ) ವಜ್ರೀ (ನಾಂತ) ವಾಸವಃ ವೃತ್ರಹಾ (ವೃತ್ರಹನ್ —ನಾಂತ) ವೃಷಾ (ವೃಷನ್ — ನಾಂತ) ವಾಸ್ತೋಷ್ಪತಿಃ ಸುರಪತಿಃ ಬಲಾರಾತಿಃ ಶಚೀಪತಿಃ ಜಂಭಭೇದೀ (ನಾಂತ) ಹರಿಹಯಃ ಸ್ವಾರಾಟ್ (ಜಾಂತ) ನಮುಚಿಸೂದನಃ ಸಂಕ್ರಂದನಃ ದುಶ್ಚ್ಯವನಃ ತುರಾಷಾಟ್ (ತುರಾಸಾಹ್ — ಹಾಂತ) ಮೇಘವಾಹನಃ ಆಖಂಡಲಃ ಸಹಸ್ರಾಕ್ಷಃ ಋಭುಕ್ಷಾಃ (ಋಭುಕ್ಷಿನ್ —ನಾಂತ) — ೩೫ ದೇವೇಂದ್ರನ ಹೆಸರು. ಪುಲೋ

ಪುಲೋಮಜಾ ಶಚೀಂದ್ರಾಣೀ ನಗರೀತ್ವಮರಾವತೀ ।
ಹಯ ಉಚ್ಚೈಃಶ್ರವಾಃ ಸೂತೋ ಮಾತಲಿರ್ನಂದನಂ ವನಮ್ ॥ ೪೫ ॥
ಸ್ಯಾತ್ಪ್ರಾಸಾದೋ ವೈಜಯಂತೋ ಜಯಂತಃ ಪಾಕಶಾಸನಿಃ ।
ಐರಾವತೋಽಭ್ರಮಾತಂಗೈರಾವಣಾಭ್ರಮುವಲ್ಲಭಾಃ ॥ ೪೬ ॥
ಹ್ರಾದಿನೀ ವಜ್ರಮಸ್ತ್ರೀ ಸ್ಯಾತ್ಕುಲಿಶಂ ಭಿದುರಂ ಪವಿಃ ।
ಶತಕೋಟಿಃ ಸ್ವರುಃ ಶಂಭೋ ದಂಭೋಲಿರಶನಿರ್ದ್ವಯೋಃ ॥ ೪೭ ॥
ವ್ಯೋಮಯಾನಂ ವಿಮಾನೋಽಸ್ತ್ರೀ ನಾರದಾದ್ಯಾಃ ಸುರರ್ಷಯಃ ।
ಸ್ಯಾತ್ಸುಧರ್ಮಾ ದೇವಸಭಾ ಪೀಯೂಷಮಮೃತಂ ಸುಧಾ ॥ ೪೮ ॥
ಮಂದಾಕಿನೀ ವಿಯದ್ಗಂಗಾ ಸ್ವರ್ಣದೀ ಸುರದೀರ್ಘಿಕಾ
ಮೇರುಃ ಸುಮೇರುರ್ಹೇಮಾದ್ರೀ ರತ್ನಸಾನುಃ ಸುರಾಲಯಃ ॥ ೪೯ ॥
ಪಂಚೈತೇ ದೇವತರವೋ ಮಂದಾರಃ ಪಾರಿಜಾತಕಃ ।
ಸಂತಾನಃ ಕಲ್ಪವೃಕ್ಷಶ್ಚ ಪುಂಸಿ ವಾ ಹರಿಚಂದನಮ್ ॥೫೦ ॥
ಸನತ್ಕುಮಾರೋ ವೈಧಾತ್ರ ಸ್ವರ್ವೈದ್ಯಾವಶ್ವಿನೀಸುತೌ ।
ನಾಸತ್ಯಾವಶ್ವಿನೌ ದಸ್ರಾವಾಶ್ವಿನೇಯೌ ಚ ತಾವುಭೌ ॥೫೧॥

---

ಮಜಾ ಶಚಿಃ ಇಂದ್ರಾಣಿ — ಇಂದ್ರನ ಪತ್ನಿಯ ಹೆಸರು. ಅಮರಾವತಿಃ — ಇಂದ್ರನ ಪಟ್ಟಣ. ಉಚ್ಚೈಃಶ್ರವಾಃ (ಉಚ್ಚೈಃಶ್ರವಸ್ — ಸಾಂತ) ಇಂದ್ರನ ಕುದುರೆ. ಮಾತಲಿಃ ಅವನ ಸಾರಥಿ. ನಂದನಂ — ಅವನ ಉದ್ಯಾನ, ವೈಜಯಂತಃ — ಅವನ ಅರಮನೆ, ಜಯಂತಃ ಪಾಕಶಾಸನಿಃ ಆತನ ಮಗನ ಹೆಸರು. ಐರಾವತಃ ಅಭ್ರಮಾತಂಗಃ ಐರಾವಣಃ ಅಭ್ರಮುವಲ್ಲಭಃ — ೪ ಇಂದ್ರನ ಆನೆ. ಹ್ರಾದಿನಿಃ (ಸ್ತ್ರೀ) ವಜ್ರಂ (ಪುಂ — ನ) ಕುಲಿಶಂ ಭಿದುರಂ ಪವಿಃ ಶತಕೋಟಿಃ ಸ್ವರುಃ ಶಂಬಃ ದಂಭೋಳಿಃ ಅಶನಿಃ (ಪು — ಸ್ತ್ರೀ) — ೧೦ ಇಂದ್ರನ ವಜ್ರಾಯುಧ, ವ್ಯೋಮಯಾನಂ ವಿಮಾನಃ (ಪುಂ — ನ) ೨ ದೇವರಥ. ನಾರದಃ — ಮುಂತಾದವರು ದೇವಋಷಿಗಳು. ಸುಧರ್ಮಾ (ಸುಧರ್ಮನ್ —ನಾಂತ) ದೇವಸಭಾ — ೨ ದೇವತೆಗಳ ಸಭೆಯ ಹೆಸರು. ಪೀಯೂಷಂ ಅಮೃತಂ ಸುಧಾ (ಸ್ತ್ರೀ) — ೩ ಅಮೃತದ ಹೆಸರು.

ಮಂದಾಕಿನೀ ವಿಯದ್ಗಂಗಾ ಸ್ವರ್ಣದಿಃ ಸುರದೀರ್ಘಿಕಾ — ೪ ಆಕಾಶ ಗಂಗೆಯ ಹೆಸರು. (ಎಲ್ಲಾ ಸ್ತ್ರೀಲಿಂಗಗಳು) ಮೇರುಃ ಸುಮೇರುಃ ಹೇಮಾದ್ರಿಃ ರತ್ನಸಾನುಃ ಸುರಾಲಯಃ — ೬ ಮೇರುಪರ್ವತದ ಹೆಸರು. (ಎಲ್ಲಾ ಪುಲ್ಲಿಂಗಗಳು) ಮಂದಾರಃ ಪರಿಜಾತಕಃ ಸಂತಾನಃ ಕಲ್ಪವೃಕ್ಷಃ ಹರಿಚಂದನಂ (ಪುಂ — ನ) ಇವು ೫ ದೇವತಾ ಕಲ್ಪವೃಕ್ಷದ ಹೆಸರು. ಸನತ್ಕುಮಾರಃ ವೈಧಾತ್ರಃ — ೨ ಬ್ರಹ್ಮನ

ಸ್ತ್ರೀಯಾಂ ಬಹುಷ್ವಪ್ಸರಸಃ ಸ್ವರ್ವೇಶ್ಯಾ ಊರ್ವಶೀಮುಖಾಃ
ಹಾಹಾ ಹೂಹೂಶ್ಚೈವಮಾದ್ಯಾ ಗಂಧರ್ವಾಸ್ತ್ರಿದಿವೌಕಸಾಮ್ ||
ಅಗ್ನಿರ್ವೈಶ್ವಾನರೋ ವಹ್ನಿರ್ವೀತಿಹೋತ್ರೋ ಧನಂಜಯಃ |
ಕೃಪೀಟಯೋನಿರ್ಜ್ವಲನೋ ಜಾತವೇದಾಸ್ತನೂನಪಾತ್ || ೫೩ ||
ಬರ್ಹಿಃ ಶುಷ್ಮಾ ಕೃಷ್ಣವರ್ತ್ಮಾ ಶೋಚಿಷ್ಕೇಶಃ ಉಷರ್ಬುಧಃ |
ಆಶ್ರಯಾಶೋ ಬೃಹದ್ಭಾನುಃ ಕೃಶಾನುಃ ಪಾವಕೋನಲಃ || ೫೪ ||
ಲೋಹಿತಾಶ್ವೋ ವಾಯುಸಖಃ ಶಿಖಾವಾನಾಶುಶುಕ್ಷಣಿಃ |
ಹಿರಣ್ಯರೇತಾ ಹುತಭುಕ್ ದಹನೋ ಹವ್ಯವಾಹನಃ || ೫೫ ||
ಸಪ್ತಾರ್ಚಿರ್ದಮುನಾಃ ಶುಕ್ರಶ್ಚಿತ್ರಭಾನುರ್ವಿಭಾವಸುಃ |
ಶುಚಿರಪಿತ್ತಂ ಔರ್ವಸ್ತು ಬಾಡಬೋ ಬಡಬಾನಲಃ || ೫೬ ||
ವಹ್ನೇರ್ದ್ವಯೋರ್ಜ್ವಾಲಕೀಲಾವರ್ಚಿರ್ಹೇತಿಃ ಶಿಖಾಸ್ತ್ರಿಯಾಮ್ |
ತ್ರಿಷು ಸ್ಫುಲಿಂಗೋಗ್ನಿಕಣಃ[4] ಸಂತಾಪಃ ಸಂಜ್ವರಃ ಸಮೌ || ೫೭ ||

---

ಮಗನು. ಸ್ವರ್ವೈದ್ಯೌ ಅಶ್ವಿನೀಸುತೌ ನಾಸತ್ಯಾ ಅಶ್ವಿನೌ ದಸ್ರೌ ಆಶ್ವಿನೇಯೌ — ೬ ದೇವವೈದ್ಯರು. ಇವರು ಯಮಳರು ಅಪ್ಸರಸಃ — ಸಾಮಾನ್ಯವಾಗಿ ಇದು ಸ್ತ್ರೀಲಿಂಗ ಬಹುವಚನದಲ್ಲಿಯೇ ಇರುತ್ತದೆ. ಸ್ವರ್ವೇಶ್ಯಾಃ೨– ಊರ್ವಶೀಮುಂತಾದ ದೇವತಾ ವೇಶ್ಯೆಯರ ಹೆಸರು. ಹಾಹಾಃ (ಆಕಾರಾಂತ ಪುಲ್ಲಿಂಗ) ಹೂಹೂಃ (ಊಕಾರಾಂತ ಪುಲ್ಲಿಂಗ) ದೇವತೆಗಳಲ್ಲಿ ಇವರಿಬ್ಬರೇ ಮೊದಲಾದ ಗಂಧರ್ವ ಗಾಯಕರಿರುತ್ತಾರೆ. ||೫೨||

ಅಗ್ನಿಃ ವೈಶ್ವಾನರಃ ವಹ್ನಿಃ ವೀತಿಹೋತ್ರಃ ಧನಂಜಯಃ ಕೃಪೀಟಯೋನಿಃ ಜ್ವಲನಃ ಜಾತವೇದಾಃ (ಸಾಂತ) ತನೂನಪಾತ್ (ತಾಂತ) ಬರ್ಹಿಃ (ಸಾಂತ) ಶುಷ್ಮಾ (ನಾಂತ) ಕೃಷ್ಣವರ್ತ್ಮಾ (ನಾಂತ) ಶೋಚಿಷ್ಕೇಶಃ ಉಷರ್ಬುಧಃ ಆಶ್ರಯಾಶಃ ಬೃಹದ್ಭಾನುಃ ಕೃಶಾನುಃ ಪಾವಕಃ ಅನಲಃ ಲೋಹಿತಾಶ್ವಃ ವಾಯುಸಖಃ ಶಿಖಾವಾನ್ (ತಾಂತ) ಆಶುಶುಕ್ಷಣಿಃ ಹಿರಣ್ಯರೇತಾಃ (ಸಾಂತ) ಹುತಭುಕ್ (ಜಾಂತ) ದಹನಃ ಹವ್ಯವಾಹನಃ ಸಪ್ತಾರ್ಚಿಃ (ಷಾಂತ) ದಮುನಾಃ (ಸಾಂತ) ಶುಕ್ರಃ ಚಿತ್ರಬಾನುಃ ವಿಭಾವಸುಃ ಶುಚಿಃ ಅಪಿತ್ತಂ (ನಪುಂಸಕ) — ೩೪ (ಬೆಂಕಿ) ಅಗ್ನಿಯ ಹೆಸರು. ಔರ್ವಃ ಬಾಡಬಃ ಬಡಬಾನಲಃ — ೩ ಬಡಬಾಗ್ನಿಯ ಹೆಸರು ||೫೬||

ಸ್ಫುಲಿಂಗಃ (ಪುಂ — ಸ್ತ್ರೀ — ನ) ಅಗ್ನಿಕಣಃ — ೨ ಬೆಂಕಿಯ ಕಿಡಿಯ ಹೆಸರು. ಸಂತಾಪಃ ಸಂಜ್ವರಃ — ೨ ಬಿಸಿ ಸುಡುವಿಕೆ. ||೫೭||

ಧರ್ಮರಾಜಃ ಪಿತೃಪತಿಃ ಸಮವರ್ತೀ (ನಾಂತ) ಪರೇತರಾಟ್ (ಜಾಂತ)

ಧರ್ಮರಾಜಃ ಪಿತೃಪತಿ ಸಮವರ್ತೀ ಪರೇತರಾಟ್ ।
ಕೃತಾಂತೋ ಯಮುನಾಭ್ರಾತಾ ಶಮನೋ ಯಮರಾಡ್ಯಮಃ ॥ ೫೮ ॥
ಕಾಲೋ ದಂಡಧರಃ ಶ್ರಾದ್ಧದೇವೋ ವೈವಸ್ವತೋಂತಕಃ ।
(ಕಿನಾಶೋ ದಕ್ಷಿಣಾಧೀಶೋ ಮೃತ್ಯುಃ ಪಾಪನಿಯಾಮಕಃ)
ರಾಕ್ಷಸಃ ಕೌಣಪಃ ಕ್ರವ್ಯಾತ್ ಕ್ರವ್ಯಾದೋಽಸ್ರಪ ಆಶರಃ ॥ ೫೯ ॥
ರಾತ್ರಿಂಚರೋ ರಾತ್ರಿಚರಃ ಕರ್ಬುರೋ ನಿಕಷಾತ್ಮಜಃ ।
ಯಾತುಧಾನಃ ಪುಣ್ಯಜನೋ ನೈರ್ಋತೋ ಯಾತು ರಕ್ಷಸೀ ॥ ೬೦ ॥
ಪ್ರಚೇತಾ ವರುಣಃ ಪಾಶೀ ಯಾದಸಾಂಪತಿರಪ್ಪತಿಃ ।
ಶ್ವಸನಃ ಸ್ಪರ್ಶನೋ ವಾಯುರ್ಮಾತರಿಶ್ವಾ ಸದಾಗತಿಃ ॥ ೬೧ ॥
ಪೃಷದಶ್ವೋ ಗಂಧವಹೋ ಗಂಧವಾಹಾನಿಲಾಶುಗಾಃ ।
ಸಮೀರ ಮಾರುತಮರುಜ್ಜಗತ್ಪ್ರಾಣ ಸಮೀರಣಾಃ ॥ ೬೨ ॥
ನಭಸ್ವದ್ವಾತಪವನ ಪವಮಾನ ಪ್ರಭಂಜನಾಃ ।
ಪ್ರಾಣೋಽಪಾನಃ ಸಮಾನಶ್ಚೋದಾನವ್ಯಾನೌ ಚ ವಾಯವಃ ॥ ೬೩ ॥
(ಹೃದಿ ಪ್ರಾಣೋ ಗುದೇಽಪಾನಃ ಸಮಾನೋ ನಾಭಿಸಂಸ್ಥಿತಃ ।
ಉದಾನಃ ಕಂಠದೇಶಸ್ಥೋ ವ್ಯಾನಃ ಸರ್ವಶರೀರಗಃ । )

---

ಕೃತಾಂತಃ ಯಮುನಾಭ್ರಾತಾ (ಋಕಾರಾಂತ) ಶಮನಃ ಯಮರಾಟ್ (ಜಾಂತ) ಯಮಃ ಕಾಲಃ ದಂಡಧರಃ ಶ್ರಾದ್ಧದೇವಃ ವೈವಸ್ವತಃ ಅಂತಕಃ— ೧೪ ಯಮನ ಹೆಸರು ಕೀನಾಶಃ ದಕ್ಷಿಣಾದೀಶಃ ಮೃತ್ಯುಃ ಪಾಪನಿಯಾಮಕಃ —೩ ಅಧಿಕಪಾಠ. ರಾಕ್ಷಸಃ ಕೌಣಪಃ ಕ್ರವ್ಯಾತ್ (ದಾಂತ) ಕ್ರವ್ಯಾದಃ ಅಸ್ರಪಃ ಆಶರಃ ರಾತ್ರಿಂಚರಃ ರಾತ್ರಿಚರಃ ಕರ್ಬುರಃ ನಿಕಷಾತ್ಮಜಃ ಯಾತುಧಾನಃ ಪುಣ್ಯಜನಃ ನೈರ್ಋತಃ ಯಾತುಃ ರಕ್ಷಃ (ಸಕಾರಾಂತ ನಪುಂಸಕ) — ೧೫ ನೈಋತಿಯ ಹೆಸರು. ॥೬೦॥

ಪ್ರಚೇತಾಃ (ಸಾಂತ) ವರುಣಃ ಪಾಶೀ (ನಾಂತ) ಯಾದಸಾಂಪತಿಃ ಅಪ್ಪತಿಃ — ೫ ವರುಣನ ಹೆಸರು. ಶ್ವಸನಃ ಸ್ಪರ್ಶನಃ ವಾಯುಃ ಮಾತರಿಶ್ವಾ (ನಾಂತ) ಸದಾಗತಿಃ ಪೃಷದಶ್ವಃ ಗಂಧವಹಃ ಗಂಧವಾಹಃ ಅನಿಲಃ ಆಶುಗಃ ಸಮೀರಃ ಮಾರುತಃ ಮರುತ್ (ತಾಂತ) ಜಗತ್ಪ್ರಾಣಃ ಸಮೀರಣಃ ನಭಸ್ವಾನ್ (ನಭಸ್ವತ್ — ಶಾಂತ) ವಾತಃ ಪವನಃ ಪವಮಾನಃ ಪ್ರಭಂಜನಃ — ೨೨ ವಾಯುವಿನ ಹೆಸರು. ಪ್ರಾಣಃ ಅಪಾನಃ ಸಮಾನಃ ಉದಾನಃ ವ್ಯಾನಃ — ೫ ದೇಹದಲ್ಲಿರುವ ಪ್ರಾಣವಾಯುಗಳು. ಹೃದಯದಲ್ಲಿ ಪ್ರಾಣವೂ ಗುದಸ್ಥಾನದಲ್ಲಿ ಅಪಾನವೂ ನಾಭಿದೇಶದಲ್ಲಿ ಸಮಾನವೂ ಕಂಠದಲ್ಲಿ ಉದಾನವೂ

ಶರೀರಸ್ಥಾ ಇಮೇ ರಂಹಸ್ತರಸೀತು ರಯಃ ಸ್ಯದಃ ।
ಜವೋಽಥ ಶೀಘ್ರಂ ತ್ವರಿತಂ ಲಘುಕ್ಷಿಪ್ರಮರಂ ದ್ರುತಮ್ ॥ ೬೪ ॥
ಸತ್ವರಂ ಚಪಲಂ ತೂರ್ಣಮವಿಲಂಬಿತ ಮಾಶು ಚ ।।
ಸತತಾನಾರತಾಶ್ರಾಂತ ಸಂತತಾವಿರತಾನಿಶಮ್ ॥ ೬೫ ॥
ನಿತ್ಯಾನವರತಾಜಸ್ರಮಪ್ಯಥಾತಿಶಯೋ ಭರಃ ।
ಅತಿವೇಲಭೃಶಾತ್ಯರ್ಥಾತಿಮಾತ್ರೋದ್ಗಾಢನಿರ್ಭರಮ್ ॥ ೬೬ ॥
ತೀವ್ರೈಕಾಂತ ನಿತಾಂತಾನಿ ಗಾಢಬಾಢ ದೃಢಾನಿ ಚ[3] ।
ಕ್ಲೀಬೇ ಶೀಘ್ರಾದ್ಯಸತ್ವೇ ಸ್ಯಾತ್ರಿಷ್ವೇಷಾಂ ಭೇದ್ಯ (ಸತ್ವ) ಗಾಮಿಯತ್
ಕುಬೇರಸ್ತ್ರ್ಯಂಬಕಸಖೋ ಯಕ್ಷರಾಡ್ಗುಹ್ಯಕೇಶ್ವರಃ ।
ಮನುಷ್ಯಧರ್ಮಾ ಧನದೋ ರಾಜರಾಜೋ ಧನಾಧಿಪಃ ॥ ೬೮ ॥
ಕಿಂನರೇಶೋ ವೈಶ್ರವಣಃ ಪೌಲಸ್ತ್ಯೋ ನರವಾಹನಃ ।

---

ವ್ಯಾನವು ಸಕಲ ಶರೀರದಲ್ಲಿಯೂ ಇರುತ್ತವೆ. ರಂಹಃ ತರಃ (ಸಾಂತ ನಪುಂಸಕ) ರಯಃ ಸ್ಯದಃ ಜವಃ — ೫ ವೇಗದ ಹೆಸರು. ಶೀಘ್ರಂ ತ್ವರಿತಂ ಲಘು (ಉಕಾರಾಂತ ನಪುಂಸಕ) ಕ್ಷಿಪ್ರಂ ಅರಂ ದ್ರುತಂ ಸತ್ವರಂ ಚಪಲಂ ತೂರ್ಣಂ ಅವಿಲಂಬಿತಂ ಆಶು (ನ) — ೧೧ ಶೀಘ್ರ ಅಂದರೆ ಬೇಗ ಎಂಬುದಕ್ಕೆ ಈ ಹೆಸರು. ॥ ೬೪ ॥

ಸತತಂ ಅನಾರತಂ ಅಶ್ರಾಂತಂ ಸಂತತಂ ಅವಿರತಃ ಅನಿಶಂ ನಿತ್ಯಂ ಅನವರತಂ ಅಜಸ್ರಂ — ೯ ಎಡೆಬಿಡದೆ ನಡೆಯುವ ಕ್ರಿಯೆ ಅಥವಾ ಕಾಲ. ಅತಿಶಯಃ ಭರಃ ಅತಿವೇಲಂ ಭೃಶಂ ಅತ್ಯರ್ಥಂ ಅತಿಮಾತ್ರಂ ಉದ್ಗಾಢಂ ನಿರ್ಭರಂ ತೀವ್ರಂ ಏಕಾಂತಂ ನಿತಾಂತಂ ಗಾಢಂ ಬಾಢಂ ದೃಢಂ — ೧೪ ಅತಿಶಯದ ಹೆಸರು. ಶೀಘ್ರದಿಂದ ದೃಢಶಬ್ದದ ವರೆಗೆ ಇರುವ ೨೪ ಪದಗಳು ಕ್ರಿಯಾವಿಶೇಷಣವಾಗಿರುವುದರಿಂದ ಅದ್ರವ್ಯವಾಚಕಗಳಾಗಿರುವುದರಿಂದ ನಪುಂಸಕದಲ್ಲಿರುತ್ತವೆ. ಉದಾ : — ಶೀಘ್ರಂ ಗಚ್ಛತಿ — ಇತ್ಯಾದಿ ಇವುಗಳ ಮಧ್ಯದಲ್ಲಿ ಯಾವುದು ಭೇದ್ಯಗಾಮಿ — ವಿಶೇಷ್ಯವನ್ನು (ದ್ರವ್ಯವಾಚಕವಾದಾಗ) ಹೊಂದಿರುತ್ತದೆ ಅದು ಮೂರು ಲಿಂಗಗಳಲ್ಲಿಯೂ ಇರುತ್ತದೆ — ಶೀಘ್ರಾ ಜರಾ. ಶೀಘ್ರೋಃ ಮೃತ್ಯುಃ, ಶೀಘ್ರಂ ವಯಃ । ಅತಿಶಯ ಭರ — ಅದ್ರವ್ಯವಾಚಿಯಾದರೂ ಪುಲ್ಲಿಂಗದಲ್ಲಿಯೇ ಇರುತ್ತವೆ. ॥ ೬೭ ॥

ಕುಬೇರಃ ತ್ರ್ಯಂಬಕಸಖಃ ಯಕ್ಷರಾಟ್ (ಜಾಂತ) ಗುಹ್ಯಕೇಶ್ವರಃ ಮನುಷ್ಯಧರ್ಮಾ (ನಾಂತ) ಧನದಃ ರಾಜರಾಜಃ ಧನಾಧಿಪಃ ಕಿಂನರೇಶಃ ವೈಶ್ರವಣಃ ಪೌಲಸ್ತ್ಯಃ ನರವಾಹನಃ ಯಕ್ಷಃ ಏಕಪಿಂಗಃ ಐಲಬಿಲಃ

ಯಕ್ಷ್ಯೈಕಪಿಂಗೈಲಬಿಲ (ಡವಿಡ) ಶ್ರೀದಪುಣ್ಯಜನೇಶ್ವರಾಃ ॥ ೬೯ ॥
ಅಸ್ಯೋದ್ಯಾನಂ ಚೈತ್ರರಥಂ ಪುತ್ರಸ್ತು ನಲಕೂಬರಃ ।
ಕೈಲಾಸಃ ಸ್ಥಾನಮಲಕಾಪೂರ್ವಿಮಾನಂ ತು ಪುಷ್ಪಕಮ್ ॥ ೭೦ ॥
ಸ್ಯಾತ್ಕಿಂನರಃ ಕಿಂಪುರುಷಸ್ತು ರಂಗವದನೋ ಮಯುಃ ।
ನಿಧಿರ್ನಾ ಶೇವಧಿರ್ಭೇದಾಃ ಪದ್ಮ ಶಂಖಾದಯೋ ನಿಧೇಃ ॥ ೭೧ ॥
(ಮಹಾಪದ್ಮಶ್ಚ ಪದ್ಮಶ್ಚ ಶಂಖೋ ಮಕರ ಕಚ್ಛಪೌ ।
ಮುಕುಂದ ಕುಂದ ನೀಲಾಶ್ಚ ಖರಶ್ಚ ನಿಧಯೋ ನವ)

ಇತಿ ಸ್ವರ್ಗವರ್ಗಃ

## ವ್ಯೋಮವರ್ಗಃ ೨

ದ್ಯೋದಿವೌ ದ್ವೇ ಸ್ತ್ರಿಯಾಮಭ್ರಂ ವ್ಯೋಮಪುಷ್ಕರಮಂಬರಮ್ ।
ನಭೋಽಂತರಿಕ್ಷಂ ಗಗನಮನಂತಂ ಸುರವರ್ತ್ಮ ಖಮ್ ॥ ೭೨ ॥
ವಿಯದ್ವಿಷ್ಣುಪದಂ ವಾ ತು ಪುಂಸ್ಯಾಕಾಶವಿಹಾಯಸೀ ।

---

(ಐಡಬಿಡಃ — ಪಾಠಾಂತರ) ಶ್ರೀದಃ ಪುಣ್ಯಜನೇಶ್ವರಃ — ೧೭ ಕುಬೇರನ ಹೆಸರು. ಚೈತ್ರರಥಂ — ಕುಬೇರನ ಉದ್ಯಾನ. ನಲಕೂಬರಃ — ಅವನ ಮಗನು ಕೈಲಾಸಃ — ಅವನು ಇರುವ ಸ್ಥಳ. ಅಲಕಾ — ಅವನ ಪಟ್ಟಣ. ಪುಷ್ಪಕಂ — ಅವನ ವಿಮಾನ. ಕಿಂನರಃ ಕಿಂಪುರುಷಃ ತುರಂಗವದನಃ ಮಯುಃ — ೪ ಕಿಂನರರ ಹೆಸರು. ಕೆಲವರು ನಾಲ್ಕನ್ನು ನಾಲ್ಕು ಜಾತಿಗಳೆಂದು ಹೇಳುತ್ತಾರೆ. ನಿಧಿಃ ಶೇವಧಿಃ (ಪುಲ್ಲಿಂಗ) ಪದ್ಮಾದಿ ನಿಧಿಗಳ ಹೆಸರು. ಮಹಾಪದ್ಮಃ ಪದ್ಮಃ ಶಂಖಃ ಮಕರಃ ಕಚ್ಛಪಃ ಮುಕುಂದಃ ಕುಂದಃ ನೀಲಃ ಖರಃ — ೯ ನವನಿಧಿಗಳ ಹೆಸರು. ॥ ೭೧ ॥

ಸ್ವರ್ಗವರ್ಗ ಮುಗಿದಿದೆ

ದ್ಯೌಃ (ಓಕಾರಾಂತ) ದ್ಯೌಃ (ದಿವ್—ವಾಂತ ಸ್ತ್ರೀಲಿಂಗ) ಅಭ್ರಂ ವ್ಯೋಮ (ನಕಾರಾಂತ ನಪುಂಸಕ) ಪುಷ್ಕರಂ ಅಂಬರಂ ನಭಃ (ಸಾಂತನಪುಂ) ಅಂತರಿಕ್ಷಂ ಗಗನಂ ಅನಂತಂ ಸುರವರ್ತ್ಮ (ನಾಂತ ನಪುಂ) ಖಂ ವಿಯತ್ (ತಾಂತ) ವಿಷ್ಣುಪದಂ ಆಕಾಶಂ (ಪು — ನಪುಂ) ವಿಹಾಯಃ (ಸಾಂತ ನಪುಂ) — ೧೭ ಆಕಾಶದ ಹೆಸರು. ॥ ೭೨ ॥

(ವಿಹಾಯಶೋಽಪಿ ನಾಕೋಽಪಿ ದ್ಯುರಪಿ ಸ್ಯಾತ್ತದವ್ಯಯಮ್ ।
ತಾರಾಪಥಶಬ್ದಗುಣೋ ಮೇಘದ್ವಾರಂ ಮಹಾಬಿಲಮ್ ।)

ಇತಿ ವ್ಯೋಮವರ್ಗಃ

## ದಿಗ್ವರ್ಗಃ ೩

ದಿಶಸ್ತು ಕಕುಭಃ ಕಾಷ್ಠಾ ಆಶಾಶ್ಚ ಹರಿತಶ್ಚ ತಾಃ ॥ ೬೩ ॥
ಪ್ರಾಚ್ಯವಾಚೀ ಪ್ರತೀಚ್ಯಸ್ತಾಃ ಪೂರ್ವದಕ್ಷಿಣ ಪಶ್ಚಿಮಾಃ ।
ಉತ್ತರಾ ದಿಗುದೀಚೀ ಸ್ಯಾದ್ದಿಶ್ಯಂ ತು ತ್ರಿಷು ದಿಗ್ಭವೇ ॥ ೬೪ ॥
ಅವಾಗ್ಭವಮವಾಚೀನಮುದೀಚೀನಮುದಗ್ಭವಮ್ ।
ಪ್ರತ್ಯಗ್ಭವಂ ಪ್ರತೀಚೀನಂ ಪ್ರಾಚೀನಂ ಪ್ರಾಗ್ಭವಂ ತ್ರಿಷು ॥ ೬೫ ॥
ಇಂದ್ರೋ ವಹ್ನೀ ಪಿತೃಪತಿರ್ನೈರ್ಋತೋ ವರುಣೋ ಮರುತ್ ।
ಕುಬೇರ ಈಶಃ ಪತಯಃ ಪೂರ್ವಾದೀನಾಂ ದಿಶಾಂ ಕ್ರಮಾತ್ ॥ ೬೬ ॥
ಐರಾವತಃ ಪುಂಡರೀಕೋ ವಾಮನಃ ಕುಮುದೋಽಂಜನಃ ।
ಪುಷ್ಪದಂತಸ್ಸಾರ್ವಭೌಮಸ್ಸುಪ್ರತೀಕಶ್ಚ ದಿಗ್ಗಜಾಃ ॥ ೬೭ ॥

---

ವಿಹಾಯಸಃ ನಾಕಃ ದ್ಯುಃ (ಅವ್ಯಯ) ತಾರಾಪಥಃ ಶಬ್ದಗುಣಃ ಮೇಘದ್ವಾರಂ ಮಹಾಬಿಲಮ್ — ೭ ಅಧಿಕವಾಗಿ ಹೇಳಿದೆ.

ವ್ಯೋಮವರ್ಗ ಮುಗಿದಿದೆ.

ದಿಶಃ (ಶಾಂತ ಸ್ತ್ರೀ) ಕಕುಭಃ (ಭಾಂತ ಸ್ತ್ರೀ) ಕಾಷ್ಠಾಃ ಆಶಾಃ ಹರಿತಃ (ತಾಂತ — ಸ್ತ್ರೀ) ೫ ದಿಕ್ಕಿನ ಹೆಸರು. ಪ್ರಾಚೀ — ಅವಾಚೀ — ಪ್ರತೀಚೀ — ಕ್ರಮವಾಗಿ ಪೂರ್ವ ದಕ್ಷಿಣ ಪಶ್ಚಿಮ ದಿಕ್ಕಿನ ಹೆಸರು. ಉದೀಚೀ — ಉತ್ತರದಿಕ್ಕು. ದಿಶ್ಯಂ (ತ್ರಿಲಿಂಗ) ದಿಕ್ಕಿನಲ್ಲಿ ಹುಟ್ಟಿದ ವಸ್ತು. ಅವಾಚೀನಂ ಅವಾಗ್ಭವಂ — ದಕ್ಷಿಣ ದಿಕ್ಕಿನಲ್ಲಿ ಹುಟ್ಟಿದ ವಸ್ತು. ಉದೀಚೀನಂ — ಉದಗ್ಭವಂ — ಉತ್ತರದಲ್ಲಿ ಹುಟ್ಟಿರುವುದು. ಪ್ರತೀಚೀನಂ ಪ್ರತ್ಯಗ್ಭವಂ — ಪಶ್ಚಿಮದಲ್ಲಿ ಹುಟ್ಟಿರುವುದು. ಪ್ರಾಚೀನಂ ಪ್ರಾಗ್ಭವಂ — ಪೂರ್ವದಲ್ಲಿ ಹುಟ್ಟಿದ ವಸ್ತು. ಇವು ಮೂರು ಲಿಂಗಗಳಲ್ಲಿಯೂ ಇರುತ್ತವೆ. ಇಂದ್ರಃ ವಹ್ನಿಃ ಪಿತೃಪತಿಃ ನೈರ್ಋತಃ ವರುಣಃ ಮರುತ್ ಕುಬೇರಃ ಈಶಃ — ಕ್ರಮವಾಗಿ ಪೂರ್ವಾದಿ ದಿಕ್ಕು ವಿದಿಕ್ಕುಗಳ ಅಧಿಪತಿಗಳು. ಐರಾವತಃ ಪುಂಡರೀಕಃ ವಾಮನಃ ಕುಮುದಃ ಅಂಜನಃ ಪುಷ್ಪದಂತಃ ಸಾರ್ವಭೌಮಃ ಸುಪ್ರತೀಕಃ — ಕ್ರಮವಾಗಿ ಪೂರ್ವಾದಿಗಳ

ಕರಿಣ್ಯೋಽಭ್ರಮುಕಪಿಲಾ ಪಿಂಗಳಾನುಪಮಾಃ ಕ್ರಮಾತ್ ।
ತಾಮ್ರಪರ್ಣೀ ಶುಭ್ರದಂತೀ ಚಾಂಗನಾ ಚಾಂಜನಾವತೀ ॥ ೭೮ ॥
ಕ್ಲೀಬಾವ್ಯಯಂತ್ವಪದಿಶಂ ದಿಶೋರ್ಮಧ್ಯೇ ವಿದಿಕ್ ಸ್ತ್ರಿಯಾಮ್ ।
ಅಭ್ಯಂತರಂ ತ್ವಂತರಾಳಂ ಚಕ್ರವಾಳಂ ತು ಮಂಡಲಮ್ ॥ ೭೯ ॥
ಅಭ್ರಂ ಮೇಘೋ ವಾರಿವಾಹಃ ಸ್ತನಯಿತ್ನುರ್ಬಲಾಹಕಃ ।
ಧಾರಾಧರೋ ಜಲಧರಸ್ತಡಿತ್ವಾನ್ವಾರಿದೋಂಬುಭೃತ್ ॥ ೮೦ ॥
ಘನಜೀಮೂತಮುದಿರ ಜಲಮುಗ್ಧೂಮಯೋನಯಃ ।
ಕಾದಂಬಿನೀ ಮೇಘಮಾಲಾ ತ್ರಿಷು ಮೇಘಭವೇಽಭ್ರಿಯಮ್ ॥ ೮೧ ॥
ಸ್ತನಿತಂ ಗರ್ಜಿತಂ ಮೇಘನಿರ್ಘೋಷೇ ರಸಿತಾದಿ ಚ ।
ಶಂಪಾ ಶತಹ್ರದಾ ಹ್ರಾದಿನ್ಯೈರಾವತ್ಯಃ ಕ್ಷಣಪ್ರಭಾ ॥ ೮೨ ॥
ತಡಿತ್ಸೌದಾಮನೀ ವಿದ್ಯುಚ್ಚಂಚಲಾ ಚಪಲಾ ಅಪಿ ।
ಸ್ಫೂರ್ಜಥುರ್ವಜ್ರನಿರ್ಘೋಷೇ ಮೇಘಜ್ಯೋತಿರಿರಮ್ಮದಃ ॥ ೮೩ ॥
ಇಂದ್ರಾಯುಧಂ ಶಕ್ರಧನುಸ್ತದೇವ ಋಜುರೋಹಿತಮ್ ।

---

ಅಷ್ಟದಿಗ್ಗಜಗಳು. ಅಭ್ರಮುಃ ಕಪಿಲಾ ಪಿಂಗಳಾ ಅನುಪಮಾ ತಾಮ್ರಪರ್ಣೀ ಶುಭ್ರದಂತೀ ಅಂಗನಾ ಅಂಜನಾವತೀ .... ೮ ಕ್ರಮವಾಗಿ ಅಷ್ಟದಿಗ್ಗಜಗಳ ಕಾಂತೆಯರ ಹೆಸರು. ॥ ೭೯ ॥

ಅಪದಿಶಂ (ನಪುಂಸಕ ಅವ್ಯಯ) ವಿದಿಕ್ .... ೨ ಆಗ್ನೇಯಾದಿ ವಿದಿಕ್ಕುಗಳ ಹೆಸರು. ಅಭ್ಯಂತರಂ ಅಂತರಾಳಂ .... ೨ ಮಧ್ಯಪ್ರದೇಶ. ಚಕ್ರವಾಳಂ ಮಂಡಲಂ .... ೨ ವರ್ತುಲಾಕಾರವಾಗಿರುವ ಪದಾರ್ಥಸಮುದಾಯ. ಅಭ್ರಂ (ನಪುಂ) ಮೇಘಃ ವಾರಿವಾಹಃ ಸ್ತನಯಿತ್ನುಃ ಬಲಾಹಕಃ ಧಾರಾಧರಃ ಜಲಧರಃ ತಟಿತ್ವಾನ್ (ತಾಂತ) ವಾರಿದಃ ಅಂಬುಭೃತ್ (ತಾಂತ) ಘನಃ ಜೀಮೂತಃ ಮುದಿರಃ ಜಲಮುಕ್ (ಚಾಂತ) ಧೂಮಯೋನಿಃ .... ೧೫ ಮೋಡದ ಹೆಸರು. ಕಾದಂಬಿನೀ ಮೇಘಮಾಲಾ .... ೨ ಮೋಡಗಳ ಸಾಲು. ಅಭ್ರಿಯಂ (ತ್ರಿಲಿಂಗ) .... ೧ ಮೇಘದಲ್ಲಿ ಹುಟ್ಟಿದ ಜಲಾದಿಗಳ ಹೆಸರು. ಶಂಪಾ ಶತಹ್ರದಾ ಹ್ರಾದಿನೀ ಐರಾವತೀ ಕ್ಷಣಪ್ರಭಾ ತಟಿತ್ (ತಾಂತ) ಸೌದಾಮನೀ ವಿದ್ಯುತ್ (ತಾಂತ) ಚಂಚಲಾ ಚಪಲಾ — ೧೦ ಮಿಂಚಿನ ಹೆಸರು. ಸ್ಫೂರ್ಜಥುಃ ವಜ್ರನಿರ್ಘೋಷಃ — ೨ ಸಿಡಿಲು. ಮೇಘಜ್ಯೋತಿಃ ಇರಂಮದಃ — ಮೋಡದ ಒಳಗಿರುವ ತೇಜಸ್ಸು. ॥ ೮೩ ॥

ಇಂದ್ರಾಯುಧಂ ಶಕ್ರಧನುಃ — ೨ ಇಂದ್ರ ಧನಸ್ಸು. (ಕಾಮನ ಬಿಲ್ಲು) ರೋಹಿತಂ — ೧ ನೆಟ್ಟಗಿರುವ ಇಂದ್ರ ಧನಸ್ಸು. ವೃಷ್ಟಿಃ (ಸ್ತ್ರೀ) ವರ್ಷಂ — ೨

ವೃಷ್ಟಿರ್ವರ್ಷಂ ತದ್ವಿಘಾತೇಽವಗ್ರಾಹಾವಗ್ರಹೌ ಸಮೌ ‖ ೮೪ ‖
ಧಾರಾಸಂಪಾತ ಆಸಾರ ಶ್ಶೀಕರೋಽಂಬುಕಣಃ ಸ್ಮೃತಃ ।
ವರ್ಷೋಪಲಸ್ತು ಕರಕೋ ಮೇಘಚ್ಛನ್ನೇಽಹ್ನಿ ದುರ್ದಿನಮ್ ‖೮೫‖
ಅಂತರ್ಧಾ ವ್ಯವಧಾ ಪುಂಸಿ ತ್ವಂತರ್ಧಿರಪವಾರಣಮ್ ।
ಅಪಿಧಾನತಿರೋಧಾನಪಿಧಾನಾಚ್ಛಾದನಾನಿಚ ‖ ೮೬ ‖
ಹಿಮಾಂಶುಶ್ಚಂದ್ರಮಾಶ್ಚಂದ್ರ ಇಂದುಃ ಕುಮುದಬಾಂಧವಃ ।
ವಿಧುಸ್ಸುಧಾಂಶುಶ್ಶುಭ್ರಾಂಶುರೋಷಧೀಶೋ ನಿಶಾಪತಿಃ ‖ ೮೭ ‖
ಅಬ್ಜೋ ಜೈವಾತೃಕಸ್ಸೋಮೋ ಗ್ಲೌರ್ಮೃಗಾಂಕಃ ಕಲಾನಿಧಿಃ ।
ದ್ವಿಜರಾಜಶ್ಶಶಧರೋ ನಕ್ಷತ್ರೇಶಃ ಕ್ಷಪಾಕರಃ ‖ ೮೮ ‖
ಕಲಾ ತು ಷೋಡಶೋ ಭಾಗೋ ಬಿಂಬೋಽಸ್ತ್ರೀ ಮಂಡಲಂ ತ್ರಿಷು ।
ಭಿತ್ತಂ ಶಕಲಖಂಡೇ ವಾ ಪುಂಸ್ಯರ್ಧೋಽರ್ಧಂ ಸಮೇಽಂಶಕೇ ‖ ೮೯ ‖
ಚಂದ್ರಿಕಾ ಕೌಮುದೀ ಜ್ಯೋತ್ಸ್ನಾ ಪ್ರಸಾದಸ್ತು ಪ್ರಸನ್ನತಾ ।
ಕಳಂಕಾಂಕೌ ಲಾಂಛನಂ ಚ ಚಿಹ್ನಂ ಲಕ್ಷ್ಮ ಚ ಲಕ್ಷಣಮ್ ‖ ೯೦ ‖

---

ಮಳೆಯ ಹೆಸರು. ವಗ್ರಹಃ ಅವಗ್ರಹಃ — ೨ ಅನಾವೃಷ್ಟಿ, ಮಳೆ ಬಾರದೇ ಆಗಿರುವ ಬರಗಾಲ. ಧಾರಾಸಂಪಾತಃ ಆಸಾರಃ — ೨ ಎಡೆಬಿಡದೆ ಸುರಿಯುವ ಜಡಿಮಳೆ. ಶೀಕರಃ ಅಂಬುಕಣಃ — ೨ ತುಂತುರು ಹನಿ. ವರ್ಷೋಪಲಃ ಕರಕಃ — ೨ ಆಲೇ (ನೇ) ಕಲ್ಲು. ದುರ್ದಿನಂ — ೧ ಮೋಡ ಮುಚ್ಚಿರುವ ದಿವಸ. ಅಂತರ್ಧಾ ವ್ಯವಧಾ (ಸ್ತ್ರೀ) ಅಂತರ್ಧಿಃ (ಪುಲ್ಲಿಂಗ) ಅಪವಾರಣಂ ಅಪಿಧಾನಂ ತಿರೋಧಾನಂ ಪಿಧಾನಂ ಆಚ್ಛಾದನಂ — ೮ ಮುಚ್ಚಳದ ಹೆಸರು. ಹಿಮಾಂಶುಃ ಚಂದ್ರಮಾಃ (ಸಾಂತ) ಚಂದ್ರಃ ಇಂದುಃ ಕುಮುದಬಾಂಧವಃ ವಿಧುಃ ಸುಧಾಂಶುಃ ಶುಭ್ರಾಂಶುಃ ಓಷಧೀಶಃ ನಿಶಾಂಪತಿಃ ಅಬ್ಜಃ ಜೈವಾತೃಕಃ ಸೋಮಃ ಗ್ಲೌಃ (ಓಕಾರಾಂತ) ಮೃಗಾಂಕಃ ಕಲಾನಿಧಿಃ ದ್ವಿಜರಾಜಃ ಶಶಧರಃ ನಕ್ಷತ್ರೇಶಃ ಕ್ಷಪಾಕರಃ — ೨೦ ಚಂದ್ರನ ಹೆಸರು. ‖೮೮‖

ಕಲಾ — ಚಂದ್ರನ ಹದಿನಾರನೆಯ ಒಂದು ಕಲೆ. ಬಿಂಬಃ (ಪುಂ — ನ) ಮಂಡಲಂ — ಚಂದ್ರ ಸೂರ್ಯರ ಮಂಡಲ. ಭಿತ್ತಂ ಶಕಲಂ ಖಂಡಂ (ಪುಂ — ನ) ಅರ್ಧಃ — ೪ ಚೂರು ಅರ್ಧಂ (ನಪುಂ — ಸಮವಾದ ಅರ್ಧಭಾಗ) ಚಂದ್ರಿಕಾ ಕೌಮುದೀ ಜ್ಯೋತ್ಸ್ನಾ — ೩ ಬೆಳದಿಂಗಳು. ಪ್ರಸಾದಃ ಪ್ರಸನ್ನತಾ — ೨ ನೈರ್ಮಲ್ಯದ ಹೆಸರು. ಕಳಂಕಃ ಅಂಕಃ ಲಾಂಛನಂ ಚಿಹ್ನಂ ಲಕ್ಷ್ಮ (ನಾಂತ ನಪುಂ) ಲಕ್ಷಣಂ — ೬ ಗುರುತು. ಪಾಳಿ ಃ ಕೇತುಃ ಧ್ವಜು

(ಪಾಳಿಃ ಕೇತುರ್ಧ್ವಜೋಲಿಂಗಂ ನಿಮಿತ್ತಂ ವ್ಯಂಜನಂ ಪದವ್ । )
(ಪ್ರಜ್ಞಾನಂ ಚಾಪ್ಯಭಿಜ್ಞಾನಂ ಲಲಾಮಂ ಚ ಲಲಾಮ ಚ । )
ಸುಷಮಾ ಪರಮಾಶೋಭಾ ಶೋಭಾಕಾಂತಿರ್ದ್ಯುತಿಶ್ಛವಿಃ ॥ ೯೧ ॥
ಅವಶ್ಯಾಯಸ್ತು ನೀಹಾರಸ್ತುಷಾರಸ್ತುಹಿನಂ ಹಿಮವ್ ।
ಪ್ರಾಲೇಯಂ ಮಿಹಿಕಾ ಚಾಥ ಹಿಮಾನೀ ಹಿಮಸಂಹತಿ ॥ ೯೨ ॥
ಶೀತಂ ಗುಣೇ ತದ್ವದರ್ಥಾಸ್ಸುಷಿಮಶ್ಶಿಶಿರೋ ಜಡಃ ।
ತುಷಾರಶ್ಶೀತಲಶ್ಶೀತೋ ಹಿಮಸ್ಸಪ್ತಾನ್ಯಲಿಂಗಕಾಃ ॥ ೯೩ ॥
ಧ್ರುವ ಔತ್ತಾನಪಾದಿಸ್ಸ್ಯಾದಗಸ್ತ್ಯಃ ಕುಂಭಸಂಭವಃ ।
ಮೈತ್ರಾವರುಣಿರಸ್ಯೈವ ಲೋಪಾಮುದ್ರಾ ಸಧರ್ಮಿಣೀ ॥ ೯೪ ॥
ನಕ್ಷತ್ರಮೃಕ್ಷಂ ಭಂ ತಾರಾ ತಾರಕಾಪ್ಯುಡುವಾ ಸ್ತ್ರಿಯಾವ್ ।
ದಾಕ್ಷಾಯಣ್ಯೋಽಶ್ವಿನೀತ್ಯಾದಿ ತಾರಾ ಅಶ್ವಯುಗಶ್ವಿನೀ ॥ ೯೫ ॥
ರಾಧಾ ವಿಶಾಖಾ ಪುಷ್ಯೇ ತು ಸಿದ್ಧ್ಯತಿಷ್ಯೌ ಶ್ರವಿಷ್ಠಯಾ ।
ಸಮಾ ಧನಿಷ್ಠಾ ಸ್ಯುಃ ಪ್ರೋಷ್ಠಪದಾ ಭಾದ್ರಪದಾಃ ಸ್ತ್ರಿಯಃ ॥
ಮೃಗಶೀರ್ಷೇ ಮೃಗಶಿರಸ್ತಸ್ಮಿನ್ನೇವಾಗ್ರಹಾಯಣೀ ॥೯೬॥

---

ಲಿಂಗಂ ನಿಮಿತ್ತಂ ವ್ಯಂಜನಂ ಪದಂ — ಇವು ಗುರುತಿಗೆ ಅಧಿಕಪಾಠ. ಸುಷಮಾ — ೧ ಅಧಿಕವಾದ ಕಾಂತಿ, ಹೊಳಪು. ಶೋಭಾ ಕಾಂತಿಃ ದ್ಯುತಿಃ ಛವಿಃ — ೪ ಕಾಂತಿಯ ಹೆಸರು. ಅವಶ್ಯಾಯಃ ನೀಹಾರಃ ತುಷಾರಃ ತುಹಿನಂ ಹಿಮಂ ಪ್ರಾಲೇಯಂ ಮಿ (ಮ) ಹಿಕಾ — ೭ ಮಂಜು, ಹಿಮ. ಹಿಮಾನೀ ಹಿಮಸಂಹತಿಃ — ೨ ಮಂಜಿನ ಗುಂಪು. ಶೀತಂ — ಇದು ಗುಣವಾಚಕವಾದಾಗ ನಪುಂಸಕ, ಶೈತ್ಯಗುಣ. ಸುಷಿಮಃ ಶಿಶಿರಃ ಜಡಃ ತುಷಾರಃ ಶೀತಲಃ ಶೀತಃ ಹಿಮಃ — ೭ ಶೈತ್ಯಗುಣವುಳ್ಳ ವಸ್ತುವಿನ ಹೆಸರು. ಇವು ವಿಶೇಷ್ಯ ಲಿಂಗಗಳಾಗುತ್ತವೆ. ॥ ೯೩ ॥

ಧ್ರುವಃ ಔತ್ತಾನಪಾದಿಃ — ೨ ಧ್ರುವನಕ್ಷತ್ರ, ಅಗಸ್ತ್ಯಃ ಕುಂಭಸಂಭವಃ ಮೈತ್ರಾವರುಣಿಃ — ೩ ಅಗಸ್ತ್ಯಮಹರ್ಷಿ. ಲೋಪಾಮುದ್ರಾ — ೧ ಅಗಸ್ತ್ಯರ ಪತ್ನಿಯ ಹೆಸರು. ನಕ್ಷತ್ರಂ ಋಕ್ಷಂ ಭಂ ತಾರಾ ತಾರಕಾ ಉಡು (ಸ್ತ್ರೀ — ನಪುಂ) — ೬ ನಕ್ಷತ್ರದ ಹೆಸರು. ದಾಕ್ಷಾಯಣ್ಯಃ (ಈಕಾರಾಂತ ಸ್ತ್ರೀ ಲಿಂಗ) ಅಶ್ವಿನೀ ಮುಂತಾದ ೨೭ ನಕ್ಷತ್ರಗಳು. ಅಶ್ವಯುಕ್ (ಜಾಂತ) ಅಶ್ವಿನೀ [ಸ್ತ್ರೀ] — ೨ ಅಶ್ವಿನೀನಕ್ಷತ್ರ. ರಾಧಾ ವಿಶಾಖಾ — ೨ ವಿಶಾಖಾನಕ್ಷತ್ರ. ಪುಷ್ಯಃ ಸಿದ್ಧ್ಯಃ ತಿಷ್ಯಃ — ೩ ಪುಷ್ಯನಕ್ಷತ್ರ. ಶ್ರವಿಷ್ಠಾ ಧನಿಷ್ಠಾ — ೨ ಧನಿಷ್ಠಾನಕ್ಷತ್ರ. ಪ್ರೋ [ಪ್ರೌ] ಷ್ಠಪದಾ ಭಾದ್ರಪದಾ – ಪೂರ್ವಾಭಾದ್ರೆ ನಕ್ಷತ್ರಃ ಮೃಗಶೀರ್ಷಂ ಮೃಗಶಿರಃ [ಸಾಂತ ನಪುಂ] ಆಗ್ರಹಾಯಣೀ — ೩ ಮೃಗಶಿರಾ

ಇಲ್ವಲಾಸ್ತಚ್ಛಿರೋದೇಶೇ ತಾರಕಾ ನಿವಸಂತಿ ಯಾಃ ॥ ೯೭ ॥
ಬೃಹಸ್ಪತಿಸ್ಸುರಾಚಾರ್ಯೋ ಗೀಷ್ಪತಿರ್ಧಿಷಣೋ ಗುರುಃ ।
ಜೀವ ಆಂಗೀರಸೋ ವಾಚಸ್ಪತಿಶ್ಚಿತ್ರಶಿಖಂಡಿಜಃ ॥ ೯೮ ॥
ಶುಕ್ರೋ ದೈತ್ಯಗುರುಃ ಕಾವ್ಯ ಉಶನಾ ಭಾರ್ಗವಃ ಕವಿಃ
ಅಂಗಾರಕಃ ಕುಜೋ ಭೌಮೋ ಲೋಹಿತಾಂಗೋ ಮಹೀಸುತಃ ॥
ರೌಹಿಣೇಯೋ ಬುಧಃ ಸೌಮ್ಯಃ ಸಮೌ ಸೌರಿಶನ್ಯೈಶ್ಚರೌ ।
(ಶನಿಮಂದೌ ಪಂಗುಕಾಳೌ ಛಾಯಾಪುತ್ರೋಽಸಿತೋರ್ಕಜಃ)
ತಮಸ್ತು ರಾಹುಸ್ಸ್ವರ್ಭಾನುಃ ಸ್ಯೆಂಹಿಕೇಯೋ ವಿಧುಂತುದಃ ॥ ೧೦೦ ॥
ಸಪ್ತರ್ಷಯೋ ಮರೀಚ್ಯತ್ರಿಮುಖಾಶ್ಚಿತ್ರಶಿಖಂಡಿನಃ ।
ರಾಶೀನಾಮುದಯೋ ಲಗ್ನಂ ತೇ ತು ಮೇಷವೃಷಾದಯಃ ॥ ೧೦೧ ॥
ಸೂರಸೂರ್ಯಾರ್ಯಮಾದಿತ್ಯ ದ್ವಾದಶಾತ್ಮದಿವಾಕರಾಃ ।
ಭಾಸ್ಕರಾಹಸ್ಕರಬ್ರಧ್ನ ಪ್ರಭಾಕರ ವಿಭಾಕರಾಃ ॥ ೧೦೨ ॥

---

ನಕ್ಷತ್ರ. ಇಲ್ವಲಾಃ — ಮೃಗಶಿರಾನಕ್ಷತ್ರದ ತಲೆಯ ಮೇಲಿರುವ ನಕ್ಷತ್ರಗಳು. ಬೃಹಸ್ಪತಿಃ ಸುರಾಚಾರ್ಯಃ ಗೀಷ್ಪತಿಃ ಧಿಷಣಃ ಗುರುಃ ಜೀವಃ ಅಂಗಿರಸಃ ವಾಚಸ್ಪತಿಃ ಚಿತ್ರಶಿಖಂಡಿಜಃ – ೯ ಬೃಹಸ್ಪತಿಯ ಹೆಸರು ॥ ೯೮ ॥

ಶುಕ್ರಃ ದೈತ್ಯಗುರುಃ ಕಾವ್ಯಃ ಉಶನಾಃ (ಸಾಂತ) ಭಾರ್ಗವಃ ಕವಿಃ — ೬ ಶುಕ್ರನ ಹೆಸರು. ಅಂಗಾರಕಃ ಕುಜಃ ಭೌಮಃ ಲೋಹಿತಾಂಗಃ ಮಹೀಸುತಃ — ೫ ಅಂಗಾರಕಗ್ರಹ. ರೌಹಿಣೇಯಃ ಬುಧಃ ಸೌಮ್ಯಃ — ೩ ಬುಧನ ಹೆಸರು. ಸೌರಿಃ ಶನ್ಯೈಶ್ಚರಃ — ೨ ಶನಿಗ್ರಹ — ಶನಿಃ ಮಂದಃ ಪಂಗುಃ ಕಾಳಃ ಛಾಯಾಪುತ್ರಃ ಅಸಿತಃ ಅರ್ಕಜಃ — ೭ ಶನಿಗೆ ಅಧಿಕ ಹೆಸರು. ತಮಃ ರಾಹುಃ ಸ್ವರ್ಭಾನುಃ ಸ್ಯೆಂಹಿಕೇಯಃ ವಿಧುಂತುದಃ — ೫ ರಾಹುವಿನ ಹೆಸರು. ಚಿತ್ರಶಿಖಂಡಿನಃ — ೧ ಮರೀಚಿ ಅತ್ರಿ ಅಂಗಿರಾಃ ಪುಲಸ್ತ್ಯಃ ಕ್ರತುಃ ಪುಲಹಃ ವಸಿಷ್ಠಃ — ಹೀಗೆ ಸಪ್ತರ್ಷಿಗಳ ಹೆಸರು. ಲಗ್ನಂ — ೧ ಮೇಷಾದಿರಾಶಿಗಳ ಉದಯಕಾಲಕ್ಕೆ ಹೆಸರು. ತಾತ್ಕಾಲಿಕಲಗ್ನ — ೨೭ ನಕ್ಷತ್ರಗಳಿಗೆ ೧೦೮ ಪಾದಗಳು. ಎರಡೂಕಾಲು ಪಾದ ೧ ರಾಶಿಗೆ ಇರುತ್ತದೆ. ಹಗಲು ೬ ರಾತ್ರಿ ೬ ರಾಶಿಗಳು ಕ್ರಮವಾಗಿ ಒಂದಾದ ಮೇಲೆ ಒಂದು ಉದಯಿಸುತ್ತವೆ. ಆ ಮೇಷಾದಿರಾಶಿಗಳು ೧೨ ॥ ೧೦೧ ॥

ಸೂರಃ ಸೂರ್ಯ ಅರ್ಯಮಾ (ನಾಂತ) ಆದಿತ್ಯಃ ದ್ವಾದಶಾತ್ಮಾ (ನಾಂತ) ದಿವಾಕರಃ ಭಾಸ್ಕರಃ ಅಹಸ್ಕರಃ ಬ್ರಧ್ನಃ ಪ್ರಭಾಕರಃ ವಿಭಾಕರಃ ಭಾಸ್ವಾನ್

ಭಾಸ್ವದ್ವಿವಸ್ವತ್ಸಪ್ತಾಶ್ವಹರಿದಶ್ವೋಷ್ಣರಶ್ಮಯಃ ।
ವಿಕರ್ತನಾರ್ಕಮಾರ್ತಂಡಮಿಹಿರಾರುಣಪೂಷಣಃ ॥ ೧೦೩ ॥
ದ್ಯುಮಣಿಸ್ತರಣಿರ್ಮಿತ್ರಶ್ಚಿತ್ರಭಾನುರ್ವಿರೋಚನಃ ।
ವಿಭಾವಸುರ್ಗ್ರಹಪತಿಸ್ತ್ವಿಷಾಂಪತಿರಹಃಪತಿಃ ॥ ೧೦೪ ॥
ಭಾನುರ್ಹಂಸಃ ಸಹಸ್ರಾಂಶುಸ್ತಪನಃ ಸವಿತಾ ರವಿಃ ।
(ಕರ್ಮಸಾಕ್ಷೀ ಜಗಚ್ಚಕ್ಷುರಂಶುಮಾಲೀ ತ್ರಯೀತನುಃ ।
ಪ್ರದ್ಯೋತನೋ ದಿನಮಣಿಃ ಖದ್ಯೋತೋ ಲೋಕಬಾಂಧವಃ
ಸುರೋತ್ತಮೋ ಧಾಮನಿಧಿಃ ಪದ್ಮಿನೀವಲ್ಲಭೋ ಹರಿಃ)
ಮಾಠರಃ ಪಿಂಗಳೋ ದಂಡಶ್ಚಂಡಾಂಶೋಃ ಪಾರಿಪಾರ್ಶ್ವಕಾಃ ।
ಸೂರಸೂತೋಽರುಣೋಽನೂರುಃ ಕಾಶ್ಯಪಿರ್ಗರುಡಾಗ್ರಜಃ ॥ ೧೦೫ ॥
ಪರಿವೇಷಸ್ತು ಪರಿಧಿರುಪಸೂರ್ಯಕಮಂಡಲೇ ।
ಕಿರಣೋಽಸ್ರಮಯೂಖಾಂಶು ಗಭಸ್ತಿ ಘೃಣಿಘೃಷ್ಟಯಃ ॥ ೧೦೬ ॥
ಭಾನುಃ ಕರೋ ಮರೀಚಿಃಸ್ತ್ರೀಪುಂಸಯೋರ್ದೀಧಿತಿಃ ಸ್ತ್ರಿಯಾಮ್ ।
(ದ್ವಯೋಸ್ತು ಗೌರ್ನಪುಂಸ್ಯರ್ಚಿಸ್ತೇಜೋಧಾಮ ಮಹೋ ವಿಭಾ)

---

(ಭಾಸ್ವತ್ — ತಾಂತ) ವಿವಸ್ವಾನ್ (ತಾಂತ) ಸಪ್ತಾಶ್ವಃ ಹರಿದಶ್ವಃ ಉಷ್ಣರಶ್ಮಿಃ ವಿಕರ್ತನಃ ಅರ್ಕಃ ಮಾರ್ತಂಡಃ ಮಿಹಿರಃ ಅರುಣಃ ಪೂಷಾ (ನಾಂತ) ದ್ಯುಮಣಿಃ ತರಣಿಃ ಮಿತ್ರಃ ಚಿತ್ರಭಾನುಃ ವಿರೋಚನಃ ವಿಭಾವಸುಃ ಗ್ರಹಪತಿಃ ತ್ವಿಷಾಂಪತಿಃ ಅಹಃಪತಿಃ ಭಾನುಃ ಹಂಸಃ ಸಹಸ್ರಾಂಶುಃ ತಪನಃ ಸವಿತಾ ರವಿಃ — ೩೭ ಸೂರ್ಯನ ಹೆಸರು. ಕರ್ಮಸಾಕ್ಷೀ (ನಾಂತ) ಜಗಚ್ಚಕ್ಷುಃ ಅಂಶುಮಾಲೀ ತ್ರಯೀತನುಃ ಪ್ರದ್ಯೋತನಃ ದಿನಮಣಿಃ ಖದ್ಯೋತಃ ಲೋಕಬಾಂಧವಃ ಸುರೋತ್ತಮಃ ಧಾಮನಿಧಿಃ ಪದ್ಮಿನೀವಲ್ಲಭಃ ಹರಿಃ ೧೨ — ಸೂರ್ಯನಿಗೆ ಅಧಿಕಪಾಠ ॥ ೧೦೪ ॥

ಮಾಠರಃ ಪಿಂಗಳಃ ದಂಡಃ — ೩ ಸೂರ್ಯನ ಸಮೀಪದಲ್ಲಿರುವ ಅಂಗ ದೇವತೆಗಳು. ಸೂರಸೂತಃ ಅರುಣಃ ಅನೂರುಃ ಕಾಶ್ಯಪಿಃ ಗರುಡಾಗ್ರಜಃ — ೫ ಸೂರ್ಯನ ಸಾರಥಿಯಾದ ಅರುಣನು. ಪರಿವೇಷಃ ಪರಿಧಿಃ — ಸೂರ್ಯನ ಕೊಡೆ. ಗಗನಗುಡಿ. ಉಪಸೂರ್ಯಕಂ ಮಂಡಲಂ — ಸೂರ್ಯನ ಪ್ರತಿಬಿಂಬ. ಕಿರಣಃ ಉಸ್ರಃ ಮಯೂಖಃ ಅಂಶುಃ ಗಭಸ್ತಿಃ ಘೃಣಿಃ ಘೃಷ್ಟಿಃ ಭಾನುಃ ಕರಃ (ಪು) ಮರೀಚಿಃ (ಪುಂ — ಸ್ತ್ರೀ) ದೀಧಿತಿಃ (ಸ್ತ್ರೀ) — ೧೧ ಸೂರ್ಯನ ಕಿರಣ ಗೌಃ ಅರ್ಚಿಃ (ನಪುಂ) ತೇಜಃ (ಸಾಂತ) ಧಾಮ (ನಾಂತ) ಮಹಃ

ಸ್ಯಃ ಪ್ರಭಾರುಗ್ರುಚಿಸ್ತ್ವಿಡ್ಭಾಭಾಶ್ಛವಿದ್ಯುತಿದೀಪ್ತಯಃ ॥ ೧೦೭ ॥
ರೋಚಿಶ್ಶೋಚಿರುಭೇ ಕ್ಲೀಬೇ ಪ್ರಕಾಶೋ ದ್ಯೋತ ಆತಪಃ ।
ಕೋಷ್ಣಂ ಕವೋಷ್ಣಂ ಮಂದೋಷ್ಣಂ ಕದುಷ್ಣಂತ್ರಿಷು ತದ್ವತಿ ॥ ೧೦೮ ॥
ತಿಗ್ಮಂ ತೀಕ್ಷ್ಣಂಖರಂ ತದ್ವನ್ಮೃಗತೃಷ್ಣಾ ಮರೀಚಿಕಾ ।
ಇತಿ ದಿಗ್ವರ್ಗಃ

## ಕಾಲವರ್ಗಃ ೪

ಕಾಲೋ ದಿಷ್ಟೋಽಪ್ಯನೇಹಾಪಿ ಸಮಯೋಽಪ್ಯಥ ಪಕ್ಷತಿಃ ॥ ೧೦೯ ॥
ಪ್ರತಿಪದ್ದ್ವೇ ಇಮೇಸ್ತ್ರೀತ್ವೇತದಾದ್ಯಾಸ್ತಿಥಯೋ ದ್ವಯೋಃ ।
ಘಸ್ರೋದಿನಾಹನೀ ವಾತು ಕ್ಲೀಬೇ ದಿವಸವಾಸರೌ ॥ ೧೧೦ ॥
ಪ್ರತ್ಯೂಷೋಽಹರ್ಮುಖಂ ಕಲ್ಯಮುಷಃ ಪ್ರತ್ಯುಷಸೀ ಅಪಿ ।

---

(ಸಾಂತ) ವಿಭಾ .... ಕಿರಣಕ್ಕೆ ಅಧಿಕಪಾತ. ಪ್ರಭಾ ರುಕ್ (ಚಾಂತ) ರುಚಿಃ ತ್ವಿಟ್ (ಷಾಂತ) ಭಾಃ (ಸಾಂತ) ಭಾ (ಆಕಾರಾಂತ) ಛವಿಃ ದ್ಯುತಿಃ ದೀಪ್ತಿಃ (ಸ್ತ್ರೀ) ರೋಚಿಃ ಶೋಚಿಃ (ಸಾಂತ ನಪುಂ).... ೧೧ ಸೂರ್ಯನ ಕಾಂತಿ. ಪ್ರಕಾಶಃ ದ್ಯೋತಃ ಆತಪಃ .... ೩ ಬಿಸಿಲು. ಕೋಷ್ಣಂ ಕವೋಷ್ಣಂ ಮಂದೋಷ್ಣಂ ಕದುಷ್ಣಂ .... ಸ್ವಲ್ಪ ಬಿಸಿಯ ಹೆಸರು. ಇದರಿಂದ ಕೂಡಿದ ವಸ್ತುವಾದರೆ ಇವು ತ್ರಿಲಿಂಗಗಳಾಗುತ್ತದೆ. ಕೋಷ್ಣಂ .... ಪಯಃ ಕೋಷ್ಣಾಃ .... ಆಪಃ ಕೋಷ್ಣಃ .... ಕರಃ (ಕಿರಣ) ಇತ್ಯಾದಿ. ತಿಗ್ಮಂ ತೀಕ್ಷ್ಣಂ ಖರಂ .... ಬಿಸಿಯ ಹೆಸರು, ಬಿಸಿಯುಳ್ಳ ವಸ್ತು ಹೇಳುವಾಗ ಹಿಂದಿನಂತೆ ಮೂರು ಲಿಂಗಗಳಲ್ಲಿಯೂ ಇರುತ್ತವೆ. ಮೃಗತೃಷ್ಣಾ ಮರೀಚಿಕಾ .... ಬಿಸಿಲುದೊರೆ. ಬಿಸಿಲು ಕುದುರೆಯ ಹೆಸರು. ॥೧೦೮॥

ದಿಗ್ವರ್ಗ ಮುಗಿದಿದೆ

ಕಾಲಃ ದಿಷ್ಟಃ ಅನೇಹಾಃ (ಸಾಂತ) ಸಮಯಃ .... ೪ ಸಾಮಾನ್ಯ ಕಾಲದ ಹೆಸರು. ಪಕ್ಷತಿಃ ಪ್ರತಿಪತ್ (ದಾಂತ ಸ್ತ್ರೀ) .... ೨ ಪಾಡ್ಯಮೀತಿಥಿ. ತಿಥಯಃ .... (ಪುಂ – ನ) ಪಾಡ್ಯ ಮುಂತಾದ ೧೬ ತಿಥಿಗಳ ಹೆಸರು. ಘಸ್ರಃ ದಿನಂ ಅಹಃ (ಸಾಂತ ನಪುಂ ) ದಿವಸಃ ವಾಸರಃ (ಪುಂ – ನಪುಂ) ೫ ದಿನದ ಹೆಸರು. ಪ್ರತ್ಯೂಷಃ (ಸಾಂತ – ನಪುಂ) ಅಹರ್ಮುಖಂ ಕಲ್ಯಂ ಉಷಃ ಪ್ರತ್ಯುಷಃ (ಸಾಂತ ದಪುಂ) ಪ್ರಭಾತಂ .... ೬ ಪ್ರಾತಃ ಕಾಲ. ಸಾಯಂ ಸಾಯಃ

ಪ್ರಭಾತಂ ಚ ದಿನಾಂತೇ ತು ಸಾಯಂಸಂಧ್ಯಾ ಪಿತೃಪ್ರಸೂಃ ॥
ಪ್ರಾಹ್ಣಾ ಪರಾಹ್ಣ ಮಧ್ಯಾಹ್ನಾ ಸ್ತ್ರಿಸಂಧ್ಯ ಮಥ ಶರ್ವರೀ ।
ನಿಶಾ ನಿಶೀಥಿನೀ ರಾತ್ರಿಸ್ತ್ರಿಯಾಮಾ ಕ್ಷಣದಾಕ್ಷಪಾ ॥ ೧೧೨ ॥
ವಿಭಾವರೀ ತಮಸ್ವಿನ್ಯೌ ರಜನೀ ಯಾಮಿನೀ ತಮೀ ।
ತಮಿಸ್ರಾ ತಾಮಸೀ ರಾತ್ರಿರ್ಜ್ಯೌತ್ಸ್ನೀ ಚಂದ್ರಿಕಯಾನ್ವಿತಾ ॥೧೧೩ ॥
ಆಗಾಮಿವರ್ತಮಾನಾಹರ್ಯುಕ್ತಾಯಾಂ ನಿಶಿ ಪಕ್ಷಿಣೀ ।
ಗಣರಾತ್ರಂ ನಿಶಾ ಬಹ್ವ್ಯಃ ಪ್ರದೋಷೋ ರಜನೀಮುಖಮ್ ॥೧೧೪ ॥
ಅರ್ಧರಾತ್ರ ನಿಶೀಥೌ ದ್ವೌ ದ್ವೌಯಾಮಪ್ರಹರೌ ಸಮೌ ।
ಸ ಪರ್ವಸಂಧಿಃ ಪ್ರತಿಪತ್ಪಂಚದಶ್ಯೋರ್ಯದಂತರಮ್ ॥ ೧೧೫ ॥
ಪಕ್ಷಾಂತೌ ಪಂಚದಶ್ಯೌ ದ್ವೇ ಪೌರ್ಣಮಾಸೀ ತು ಪೂರ್ಣಿಮಾ ।
-ಕಳಾಹೀನೇ ಸಾನುಮತಿಃ ಪೂರ್ಣೇ ರಾಕಾ ನಿಶಾಕರೇ ॥ ೧೧೬ ॥
ಅಮಾವಾಸ್ಯಾ ತ್ವಮಾವಸ್ಯಾ ದರ್ಶಸ್ಸೂರ್ಯೇಂದು ಸಂಗಮಃ ।

---

ಸಾಯಂಕಾಲ. ಸಂಧ್ಯಾ ಪಿತೃಪ್ರಸೂಃ (ಸ್ತ್ರೀ) .... ೨ ಸಂಜೆ, ಸಂಧ್ಯಾಕಾಲ ಪ್ರಾಹ್ಣಃ.... ಬೆಳಿಗ್ಗೆ ೧೨ ಘಂಟೆಯ ವರೆಗಿನ ಕಾಲ. ಅಪರಾಹ್ಣಃ.... ೧೨ ಘಂಟೆಯ ಮೇಲಿನ ಕಾಲ. ಮಧ್ಯಾಹ್ನಃ .... ಸರಿ ಹಗಲು. ತ್ರಿಸಂಧ್ಯಂ .... ಆದಿಮಧ್ಯ ಸಂಜೆಯ ಮೂರು ಸಂಧ್ಯಾ ಕಾಲಗಳು. ಶರ್ವರೀ ನಿಶಾ ನಿಶೀಥಿನೀ ರಾತ್ರಿಃ ತ್ರಿಯಾಮಾ ಕ್ಷಣದಾ ಕ್ಷಪಾ ವಿಭಾವರೀ ತಮಸ್ವಿನೀ ರಜನೀ ಯಾಮಿನೀ ತಮೀ – ೧೨ ರಾತ್ರಿ. ತಮಿಸ್ರಾ – ಗಾಢಾಂಧಕಾರವಾದ ರಾತ್ರಿ. ಜ್ಯೌತ್ಸ್ನೀ ಬೆಳದಿಂಗಳಿಂದ ಕೂಡಿದ ರಾತ್ರಿ. ॥೧೧೩॥

ಪಕ್ಷಿಣೀ – ೧ ಎರಡು ಹಗಲುಗಳ ಮಧ್ಯದ ರಾತ್ರಿ – ಈಗಿನ ಹಗಲು ಇಂದಿನ ರಾತ್ರಿ ಮುಂದಿನ ಹಗಲು ಹೀಗೆ ೯೦ ಘಳಿಗೆಗಳ ಕಾಲ. ಗಣರಾತ್ರಂ – ೧ ಅನೇಕ ರಾತ್ರಿಗಳು. ಪ್ರದೋಷಃ ರಜನೀಮುಖಂ – ೨ ಪ್ರದೋಷಕಾಲ. ಅರ್ಧರಾತ್ರಃ ನಿಶೀಥಃ – ೨ ಅರ್ಧರಾತ್ರಿ. ಯಾಮಃ ಪ್ರಹರಃ – ೨ ಜಾಮದ ಹೆಸರು. ೬೦ ಘಳಿಗೆಯ ಎನೆಯ ಒಂದು ಭಾಗ. ಏಳೂವರೆ ಘಳಿಗೆ ಪರ್ವಸಂಧಿಃ – ಪಾಡ್ಯಮೀ ಹುಣ್ಣಿಮೆಗಳಿಗೂ ಅಮಾವಾಸ್ಯೆ ಪಾಡ್ಯಮಿಗಳಿಗೂ ಇರುವ ಮಧ್ಯಕಾಲದ ಹೆಸರು. ಪಕ್ಷಾಂತೌ(ಪು) ಪಂಚದಶ್ಯೌ (ಸ್ತ್ರೀ) – ೨ ಅಮಾವಾಸ್ಯೆ ಹುಣ್ಣಿಮೆಗಳ ಹೆಸರು. ಪೌರ್ಣಮಾಸೀ ಪೂರ್ಣಿಮಾ – ೨ ಹುಣ್ಣಿಮೆ. ಅನುಮತಿಃ – ೧ ಒಂದು ಕಲೆ ಕಡಿಮೆಯಾದ ಚಂದ್ರನುಳ್ಳ ಹುಣ್ಣಿಮೆ. ಚಂದ್ರೋದಯ ಕಾಲಕ್ಕೆ ಚತುರ್ದಶೀ ಅಥವಾ ಪಾಡ್ಯಮೀ ಸೇರಿದ ಹುಣ್ಣಿಮೆ ರಾಕಾ – ೧ ಪೂರ್ಣ ಚಂದ್ರನುಳ್ಳ ಹುಣ್ಣಿಮೆ ರಾತ್ರಿ. ಅಮಾವಾಸ್ಯಾ ಅಮಾವಸ್ಯಾ ದರ್ಶಃ ಸೂರ್ಯೇಂದುಸಂಗಮಃ

ಸಾ ದೃಷ್ಟೇಂದುಸ್ಸಿನೀವಾಲೀ ಸಾ ನಷ್ಟೇಂದುಕಲಾ ಕುಹೂಃ ॥ ೧೧೭ ॥
ಉಪರಾಗೋ ಗ್ರಹೋ ರಾಹುಗ್ರಸ್ತೇತ್ವಿಂದೌ ಚ ಪೂಷ್ಣಿ ಚ ।
ಸೋಪಪ್ಲವೋಪರಕ್ತೌದ್ವಾ ವಗ್ನ್ಯುತ್ಪಾತ ಉಪಾಹಿತಃ ॥ ೧೧೮ ॥
ಏಕಯೋಕ್ತ್ಯಾ ಪುಷ್ಪವಂತೌ ದಿವಾಕರನಿಶಾಕರೌ ।
ಅಷ್ಟಾದಶನಿಮೇಷಾಸ್ತು ಕಾಷ್ಠಾ ತ್ರಿಂಶತ್ತು ತಾಃ ಕಲಾ ॥ ೧೧೯ ॥
ತಾಸ್ತು ತ್ರಿಂಶತ್‌ಕ್ಷಣಸ್ತೇತು ಮುಹೂರ್ತೋ ದ್ವಾದಶಾಸ್ತ್ರಿಯಾಮ್ ।
ತೇತು ತ್ರಿಂಶದಹೋರಾತ್ರಃ ಪಕ್ಷಸ್ತೇ ದಶ ಪಂಚ ಚ ॥ ೧೨೦ ॥
ಪಕ್ಷೌ ಪೂರ್ವಾಪರೌ ಶುಕ್ಲ ಕೃಷ್ಣೌ ಮಾಸಸ್ತು ತಾವುಭೌ ।
ದ್ವೌ ದ್ವೌ ಮಾರ್ಗಾದಿಮಾಸೌ ಸ್ಯಾದೃತುಸ್ತೈರಯನಂ ತ್ರಿಭಿಃ ॥ ೧೨೧ ॥
ಅಯನೇ ದ್ವೇ ಗತಿರುದಗ್ದಕ್ಷಿಣಾರ್ಕಸ್ಯ ವತ್ಸರಃ ।
ಸಮರಾತ್ರಿಂದಿವೇ ಕಾಲೇ ವಿಷುವದ್ವಿಷುವಂ ಚ ತತ್ ॥ ೧೨೨ ॥

---

— ೪ ಅಮಾವಾಸ್ಯೆ. ಸಿನೀವಾಲೀ — ೧ ಚಂದ್ರ ಕಲೆ ಕಾಣಿಸಿದ ಅಮಾವಾಸ್ಯೆ. ಸಾಯಂಕಾಲಕ್ಕೆ ಚತುರ್ದಶೀ ಅಥವಾ ಪಾಡ್ಯಮೀ ಇರುವ ಅಮಾವಾಸ್ಯೆ. ಕುಹೂಃ (ಉಕಾರಾಂತ ಸ್ತ್ರೀ) — ೧ ಕಾಣಿಸದಿರುವ ಚಂದ್ರಕಲೆಯುಳ್ಳ ಅಮಾವಾಸ್ಯೆ. ಉಪರಾಗಃ ಗ್ರಹಃ — ೨ ಗ್ರಹಣ. ಸೂರ್ಯ ಚಂದ್ರ ಬಿಂಬಗಳಲ್ಲಿ ರಾಹು ಕೇತುಗಳೆಂಬ ತಮೋಮಂಡಲದ ಸಂಬಂಧದಿಂದ ಕಪ್ಪಾಗಿ ಅಥವಾ ಕಪಿಲವಾಗಿ ತೋರುವಿಕೆ. ಸೋಪಪ್ಲವಃ ಉಪರಕ್ತಃ — ೨ ರಾಹುಗ್ರಸ್ತವಾದ ಸೂರ್ಯ ಚಂದ್ರರು. ಅಗ್ನ್ಯುತ್ಪಾತಃ ಉಪಾಹಿತಃ — ೨ ಧೂಮಕೇತು. ॥ ೧೧೮ ॥

ಪುಷ್ಪವಂತೌ — (ತಾಂತ ಪುಲ್ಲಿಂಗ — ಅಕರಾಂತ ಪುಲ್ಲಿಂಗ ದ್ವಿವಚನ) ಒಂದು ಮಾತಿನಿಂದ ಸೂರ್ಯ ಚಂದ್ರರ ಹೆಸರು. | ಕಾಷ್ಠಾ — ೧ ಹದಿನೆಂಟು ಸಾರಿ ರೆಪ್ಪೆ ಆಡಿಸುವಷ್ಟು ಕಾಲ. ಕಲಾ — ೧ ಅಂತಹ ಕಾಷ್ಠಗಳು ೩೦ ಆಗುವಷ್ಟು ಕಾಲ. ಕ್ಷಣಃ — ೩೦ ಕಲೆಗಳ ಕಾಲ. ಮುಹೂರ್ತಃ – ೧೨ ಕ್ಷಣಗಳ ಕಾಲ. ಅಹೋರಾತ್ರಃ — ೩೦ ಮುಹೂರ್ತಗಳ ಕಾಲ. | ಪಕ್ಷಃ – ೧೫ ಅಹೋರಾತ್ರಗಳ ಕಾಲ. ಶುಕ್ಲಃ – ಪೂರ್ವಪಕ್ಷ. ಕೃಷ್ಣಃ – ಅಪರಪಕ್ಷ. ಮಾಸಃ – ಶುಕ್ಲ ಕೃಷ್ಣ ಪಕ್ಷಗಳೆರಡು ಕೂಡಿದ ಕಾಲ. ತಿಂಗಳು. ಋತುಃ – ಮಾಘಾದಿ ಎರಡೆರಡು ತಿಂಗಳ ಕಾಲ. ಅಯನಂ – ಮೂರು ಋತುಗಳು ಕೂಡಿದ ಕಾಲ. ೬ ತಿಂಗಳು ಸೂರ್ಯನ ಉತ್ತರಗತಿ ಇರುವಾಗ 'ಉತ್ತರಾಯಣ'ವೆಂದು, ದಕ್ಷಿಣಗತಿಯಿರುವಾಗ ದಕ್ಷಿಣಾಯನವೆಂದು ಕರೆಯುತ್ತಾರೆ. ವತ್ಸರಃ – ಎರಡು ಅಯನಗಳು ಸೇರಿದ ಕಾಲ, ವರ್ಷ. ವಿಷುವತ್ ವಿಷುವಂ – ೨ ಸಮವಾದ ರಾತ್ರಿ ಹಗಲುಳ್ಳ ಕಾಲ. ತುಲಾ ಮೇಷ ಸಂಕ್ರಮಣಗಳ ಕಾಲ. ಪೌಷೀ – ಪುಷ್ಯನಕ್ಷತ್ರ

ಪುಷ್ಯಯುಕ್ತಾ ಪೌರ್ಣಮಾಸೀ ಪೌಷೀ ಮಾಸೇ ತು ಯತ್ರ ಸಾ ।
ನಾಮ್ನಾ ಸ ಪೌಷೋ ಮಾಘಾದ್ಯಾಶ್ಚೈವಮೇಕಾದಶಾ ಪರೇ
ಮಾರ್ಗಶೀರ್ಷೇ ಸಹಾ ಮಾರ್ಗ ಆಗ್ರಹಾಯಣಿಕಶ್ಚ ಸಃ ।
ಪೌಷೇ ತೈಷಸಹಸ್ಯೌ ದ್ವೌ ತಪಾ ಮಾಘೇಽಥ ಫಾಲ್ಗುನೇ ॥೧೩॥
ಸ್ಯಾತ್ತಪಸ್ಯಃ ಫಾಲ್ಗುನಿಕಸ್ಸ್ಯಾಚ್ಚೈತ್ರೇ ಚೈತ್ರಿಕೋ ಮಧುಃ ।
ವೈಶಾಖೇ ಮಾಧವೋ ರಾಧೋ ಜ್ಯೈಷ್ಠೇ ಶುಕ್ರಶ್ಶುಚಿಸ್ತ್ವಯಮ್ ॥೧೪॥
ಆಷಾಢೇ ಶ್ರಾವಣೇ ತು ಸ್ಯಾನ್ನಭಾಃ ಶ್ರಾವಣಿಕಶ್ಚ ಸಃ ।
ಸ್ಯುರ್ನಭಸ್ಯಃ ಪ್ರೌಷ್ಠಪದ ಭಾದ್ರ ಭಾದ್ರಪದಾಃ ಸಮಾಃ ॥ ೧೫ ॥
ಸ್ಯಾದಾಶ್ವಿನ ಇಷೋಽಪ್ಯಾಶ್ವಯುಜೋಽಪಿ ಸ್ಯಾತ್ತು ಕಾರ್ತಿಕೇ ।
ಬಾಹುಲೋರ್ಜೌ ಕಾರ್ತಿಕಿಕೋ ಹೇಮಂತಃ ಶಿಶಿರೋಽಸ್ತ್ರಿಯಾಂ ॥ ॥ ೧೬ ॥
ವಸಂತೇ ಪುಷ್ಪಸಮಯಸ್ಸುರಭಿರ್ಗ್ರೀಷ್ಮ ಊಷ್ಮಕಃ ।
ನಿದಾಘ ಉಷ್ಣೋಪಗಮ ಉಷ್ಣ ಊಷ್ಮಾಗಮಸ್ತಪಃ ॥ ೧೭ ॥
ಸ್ತ್ರಿಯಾಂ ಪ್ರಾವೃಟ್ಸ್ತ್ರಿಯಾಂ ಭೂಮ್ನಿ ವರ್ಷಾ ಅಥ ಶರತ್ ಸ್ತ್ರಿಯಾಂ .

---

ದಿಂದ ಕೂಡಿದ ಹುಣ್ಣಿಮೆ. ಪೌಷಃ – ಪೌಷೀಹುಣ್ಣಿಮೆ ಇರುವ ತಿಂಗಳು. ಹೀಗೆಯೇ ಮಾಘಾದಿಗ ತಿಂಗಳ ಹೆಸರನ್ನು ತಿಳಿಯಬೇಕು. ಮಖಾನಕ್ಷತ್ರದಿಂದ ಕೂಡಿದ ಹುಣ್ಣಿಮೆಯುಳ್ಳ ತಿಂಗಳು ಮಾಘಮಾಸ – ಇತ್ಯಾದಿ. ॥ ೧೩ ॥

ಮಾರ್ಗಶೀರ್ಷಃ ಸಹಾ (ಸಾಂತ) (ಮಾರ್ಗ) ಆಗ್ರಹಾಯಣಿಕಃ – ೪ ಮಾರ್ಗಶೀರ್ಷ ಮಾಸದ ಹೆಸರು. ಪೌಷಃ ತೈಷಃ ಸಹಸ್ಯಃ – ೩ ಪುಷ್ಯಮಾಸ. ತಪಾಃ ಮಾಘಃ – ೨ ಮಾಘಮಾಸ. ಫಾಲ್ಗುನಃ ತಪಸ್ಯಃ ಫಾಲ್ಗುನಿಕಃ — ೩ ಫಾಲ್ಗುಣಮಾಸ. ಚೈತ್ರಃ ಚೈತ್ರಿಕಃ ಮಧುಃ — ೩ ಚೈತ್ರಮಾಸ. ವೈಶಾಖಃ ಮಾಧವಃ ರಾಧಃ — ೩ ವೈಶಾಖಮಾಸ. ಜ್ಯೈಷ್ಠಃ ಶುಕ್ರಃ — ೨ ಜ್ಯೇಷ್ಠಮಾಸ. ಶುಚಿಃ ಆಷಾಢಃ — ೨ ಆಷಾಢಮಾಸ. ಶ್ರಾವಣಃ ನಭಾಃ (ಸಾಂತ) ಶ್ರಾವಣಿಕಃ — ೩ ಶ್ರಾವಣಮಾಸ ನಭಸ್ಯಃ ಪ್ರೌಷ್ಠಪದಃ ಭಾದ್ರಃ ಭಾದ್ರಪದಃ — ೪ ಭಾದ್ರಪದಮಾಸ. ಆಶ್ವಿನಃ ಇಷಃ ಆಶ್ವಯುಜಃ — ೩ ಅಶ್ವಯುಜಮಾಸ. ಕಾರ್ತಿಕಃ ಬಾಹುಲಃ ಊರ್ಜಃ ಕಾರ್ತಿಕಿಕಃ — ೪ ಕಾರ್ತಿಕಮಾಸ. ಹೇಮಂತಃ — ೧ ಹೇಮಂತ ಋತು. ಶಿಶಿರಃ (ಪುಂ — ನಪುಂ) ಶಿಶಿರಋತು. ವಸಂತಃ ಪುಷ್ಪಸಮಯಃ ಸುರಭಿಃ — ೩ ವಸಂತಋತು. ಗ್ರೀಷ್ಮಃ ಊಷ್ಮಕಃ ನಿದಾಘಃ ಉಷ್ಣೋಪಗಮಃ ಉಷ್ಣಃ ಊಷ್ಮಾಗಮಃ ತಪಃ — ೭ ಗ್ರೀಷ್ಮಋತುವಿನ ಹೆಸರು. ॥ ೧೪ ॥

ಪ್ರಾವೃಟ್ (ಷಾಂತಸ್ತ್ರೀ) ವರ್ಷಾಃ (ಆಕಾರಾಂತ ನಿತ್ಯ ಬಹುವಚನಾಂತ

ಷಡಮೀ ಋತವಃ ಪುಂಸಿ ಮಾರ್ಗಾದೀನಾಂ ಯುಗ್ಮೈಃ ಕ್ರಮಾತ್ ॥೧೨೮॥
ಸಂವತ್ಸರೋ ವತ್ಸರೋಽಬ್ದೋ ಹಾಯನೋಽಸ್ತ್ರೀ ಶರತ್ಸಮಾಃ ।
ಮಾಸೇನ ಸ್ಯಾದಹೋರಾತ್ರಃ ಪೈತ್ರೋ ವರ್ಷೇಣ ದೈವತಃ ॥೧೨೯॥
ದಿವ್ಯೈರ್ವರ್ಷಸಹಸ್ರೈರ್ದ್ವಾದಶಭಿರ್ದೈವತಂ ಯುಗವ್ ।
ದೈವೇ ಯುಗ ಸಹಸ್ರೇದ್ವೇ ಬ್ರಾಹ್ಮಃ ಕಲ್ಪೌ ತು ತೌ ನೃಣಾವ್ ॥ ॥ ೧೩೦ ॥
ಮನ್ವಂತರಂ ತು ದಿವ್ಯಾನಾಂ ಯುಗಾನಾಮೇಕಸಪ್ತತಿಃ ।
ಸಂವರ್ತಃ ಪ್ರಳಯಃ ಕಲ್ಪಃ ಕ್ಷಯಃ ಕಲ್ಪಾಂತ ಇತ್ಯಪಿ ॥೧೩೧॥
ಅಸ್ತ್ರೀ ಪಂಕಂ ಪುಮಾನ್ ಪಾಪ್ಮಾ ಪಾಪಂ ಕಿಲ್ಬಿಷಕಲ್ಮಷವ್ ।
ಕಲುಷಂ ವೃಜಿನೈನೋಘಮಂಹೋದುರಿತ ದುಷ್ಕೃತವ್ ॥೧೩೨॥
ಸ್ಯಾದ್ಧರ್ಮಮಸ್ತ್ರಿಯಾಂ ಪುಣ್ಯಶ್ರೇಯಸೀ ಸುಕೃತಂ ವೃಷಃ ।
ಮುತ್ ಪ್ರೀತಿಃ ಪ್ರಮದೋ ಹರ್ಷಃ ಪ್ರಮೋದಾಮೋದಸಮ್ಮದಾಃ ॥ ೧೩೩ ॥

---

ಸ್ತ್ರೀಲಿಂಗ) – ೨ ಮಳೆಗಾಲ. ವರ್ಷಋತುವಿನ ಹೆಸರು. ಶರತ್ (ದಾಂತ ಸ್ತ್ರೀ) – ೧ ಶರದೃತು ಈ ೬ ಋತುಗಳು ಮಾರ್ಗಶೀರ್ಷಾದಿ ಎರಡೆರಡು ತಿಂಗಳಿಂದ ಆಗುತ್ತವೆ. ಋತುಶಬ್ದ ಪುಲ್ಲಿಂಗ. ಸಂವತ್ಸರಃ ವತ್ಸರಃ ಅಬ್ದಃ ಹಾಯನಃ (ಪುಂ – ನಪುಂ) ಶರತ್ (ದಾಂತ) ಸಮಾಃ (ಆಕಾರಾಂತ ಬಹುವಚನ ಸ್ತ್ರೀಲಿಂಗ) – ೬ ವರ್ಷದ ಹೆಸರು. ಮಾಸೇನ ಪೈತ್ರಃ ಅಹೋರಾತ್ರಃ – ನಮ್ಮ ಒಂದು ತಿಂಗಳಿಂದ ಪಿತೃಗಳಿಗೆ ಒಂದು ದಿನ. ಶುಕ್ಲಪಕ್ಷ ಹಗಲು. ಕೃಷ್ಣಪಕ್ಷ ರಾತ್ರಿ. ಮನುಷ್ಯರ ೧ ವರ್ಷದಿಂದ ದೇವತೆಗಳಿಗೆ ಒಂದು ದಿನ. ಉತ್ತರಾಯಣ ಹಗಲು ದಕ್ಷಿಣಾಯನ ರಾತ್ರಿ. ದೇವತೆಗಳ ೧೨೦೦೦ ವರ್ಷಗಳಿಗೆ ಅವರ ೧ ಯುಗ. ದೈವಯುಗ ೨೦೦೦ ವಾದರೆ ಬ್ರಹ್ಮನಿಗೆ ಒಂದು ದಿನ. ಆಗ ಮನುಷ್ಯರಿಗೆ ೨ ಕಲ್ಪ ಗಳಾಗುತ್ತವೆ. ಬ್ರಹ್ಮನ ಹಗಲು ಉದಯ ಕಲ್ಪ. ರಾತ್ರಿ ಕ್ಷಯಕಲ್ಪ. ಮನ್ವಂತರಂ – ದೇವತಾಯುಗಗಳ ೭೧ ಆಗುವಷ್ಟು ಕಾಲ. (೭೧ ದೇವಯುಗ – ೧ ಮನ್ವಂತರಂ) ಸಂವರ್ತಃ ಪ್ರಲಯಃ ಕಲ್ಪಃ ಕ್ಷಯಃ ಕಲ್ಪಾಂತಃ – ೫ ಪ್ರಳಯಕಾಲ. ಪಂಕಂ (ಪುಂ ನಪುಂ) ಪಾಪ್ಮಾ (ನಾಂತ ಪುತಂಗ) ಪಾಪಂ ಕಿಲ್ಬಿಷಂ ಕಲ್ಮಷಂ ಕಲುಷಂ ವೃಜಿನಂ ಏನಃ(ಸಾಂತ ನಪುಂ) ಅಘಂ ಅಂಹಃ (ಸಾಂತ ನಪುಂ) ದುರಿತಂ ದುಷ್ಕೃತಂ – ಪಾಪದ ಹೆಸರು. ॥೧೩೩॥

ಧರ್ಮಃ (ಪುಂ – ನಪುಂ) ಪುಣ್ಯಂ. ಶ್ರೇಯಃ (ಸಾಂತನ) ಸುಕೃತಂ ವೃಷಃ - ೫ ಪುಣ್ಯದ ಹೆಸರು- ಮುತ್ (ದಾಂತ) ಪ್ರೀತಿಃ ಪ್ರಮದಃ ಹರ್ಷಃ ಪ್ರಮೋದಃ ಆಮೋದಃ ಸಮ್ಮದಃ ಆನಂದಥುಃ ಆನಂದಃ ಶರ್ಮ

ಸ್ಯಾದಾನಂದಥುರಾನಂದಃ ಶರ್ಮಶಾತಸುಖಾನಿಚ ।
ಶ್ವಶ್ರೇಯಸಂ ಶಿವಂ ಭದ್ರಂ ಕಲ್ಯಾಣಂ ಮಂಗಳಂ ಶುಭಮ್ ॥೧೩೪॥
ಭಾವುಕಂ ಭವುಕಂ ಭವ್ಯಂ ಕುಶಲಂ ಕ್ಷೇಮಮಸ್ತ್ರಿಯಾಂ ।
ಶಸ್ತಂ ಚಾಥ ತ್ರಿಷು ದ್ರವ್ಯೇ ಪಾಪಂ ಪುಣ್ಯಂ ಸುಖಾದಿ ಚ ॥೧೩೫॥
ಮತಲ್ಲಿಕಾ ಮಚರ್ಚಿಕಾ ಪ್ರಕಾಂಡಮುದ್ಘತಲ್ಲಜೌ !
ಪ್ರಶಸ್ತವಾಚಕಾನ್ಯಮೂನ್ಯಯಶ್ಶು ಭಾವಹೋ ವಿಧಿಃ ॥೧೩೬॥
ದೈವಂ ದಿಷ್ಟಂ ಭಾಗಧೇಯಂ ಭಾಗ್ಯಂ ಸ್ತ್ರೀ ನಿಯತಿರ್ವಿಧಿಃ !
ಹೇತುರ್ನಾಕಾರಣಂ ಬೀಜಂ ನಿದಾನಂ ತ್ವಾದಿಕಾರಣಮ್ ॥೧೩೭॥
ಕ್ಷೇತ್ರಜ್ಞ ಆತ್ಮಾ ಪುರುಷಃ ಪ್ರಧಾನಂ ಪ್ರಕೃತಿಃ ಸ್ತ್ರಿಯಾಮ್।
ವಿಶೇಷಃ ಕಾಲಿಕೋಽವಸ್ಥಾ ಗುಣಾಸ್ಸತ್ವಂ ರಜಸ್ತಮಃ ॥ ೧೩೮ ॥
ಜನುರ್ಜನನ ಜನ್ಮಾನಿ ಜನಿರುತ್ಪತ್ತಿರುದ್ಭವಃ ।
ಪ್ರಾಣೀ ತು ಚೇತನೋ ಜನ್ಮೀ ಜಂತುಜನ್ಯು ಶರೀರಿಣಃ ॥ ೧೩೯॥

---

(ನಾಂತನ) ಶಾತಂ ಸುಖಂ – ೧೨ ಸಂತೋಷ. ಶ್ವಶ್ರೇಯಸಂ ಶಿವಂ ಭದ್ರಂ ಕಲ್ಯಾಣಂ ಮಂಗಳಂ ಶುಭಂ ಭಾವುಕಂ ಭವುಕಂ ಭವ್ಯಂ ಕುಶಲಂ ಕ್ಷೇಮಂ ಶಸ್ತಂ – ೧೨ ಶುಭದ ಹೆಸರು. ಪಾಪಪುಣ್ಯಾದಿಶಬ್ದಗಳೂ ದ್ರವ್ಯವಾಚಕವಾದಾಗ ಮೂರು ಲಿಂಗ ಹೊಂದುತ್ತವೆ. ಅಂದರೆ ವಿಶೇಷ್ಯಲಿಂಗಾಧೀನ ವಾಗುತ್ತವೆ. ಮತಲ್ಲಿಕಾ ಮಚರ್ಚಿಕಾ ಪ್ರಕಾಂಡಂ ಉದ್ಘಃ ತಲ್ಲಜಃ – ೫ ಶ್ರೇಷ್ಠವಾಚಕಗಳು. ಆಯಃ ೧ ಶುಭವನ್ನುಂಟುಮಾಡುವ ಸತ್ಕರ್ಮ. ದೈವಂ ದಿಷ್ಟಂ ಭಾಗಧೇಯಂ ಭಾಗ್ಯಂ ನಿಯತಿಃ . ವಿಧಿಃ – ೬ ಪೂರ್ವ ಕೃತವಾದ ಶುಭಾಶುಭ ಕರ್ಮಅದೃಷ್ಟ. ಹೇತುಃ ಕಾರಣಂ ಬೀಜಂ – ೩ ಕಾರಣದ ಹೆಸರು. ನಿದಾನಂ ಆದಿಕಾರಣಂ – ಮೊದಲನೆಯ ಕಾರಣದ ಹೆಸರು. ೧೩೭

ಕ್ಷೇತ್ರಜ್ಞಃ ಆತ್ಮಾ (ನಾಂತ) ಪುರುಷಃ – ೩ ಜೀವನ ಹೆಸರು. ಪ್ರಧಾನಂ ಪ್ರಕೃತಿಃ ೨ ಸಾಂಖ್ಯರು ಒಪ್ಪಿದ ಪ್ರಕೃತಿಯ ಹೆಸರು. ಅವಸ್ಥಾ – ಕಾಲವಶದಿಂದ ಆಗುವ ಯೌವನಾದಿ ವಿಶೇಷ. ಸತ್ವಂ ರಜಃ ತಮಃ (ಸಾಂತ ನಪುಂ) – ೩ ಪ್ರಕೃತಿಯ ಗುಣಗಳು. ಜನುಃ (ಸಾಂತ ನಪುಂ) ಜನನಂ ಜನ್ಮ (ನಾಂತ ನಪುಂ) ಜನಿಃ ಉತ್ಪತ್ತಿಃ(ಸ್ತ್ರೀ) ಉದ್ಭವಃ – ೬ ಹುಟ್ಟುವಿಕೆ, ಜನ್ಮ. ಪ್ರಾಣಿಃ (ನಾಂತ) ಚೇತನಃ ಜನ್ಮಿಃ (ನಾಂತ) ಜಂತುಃ ಜನ್ಯುಃ ಶರೀರಿಃ (ನಾಂತ) – ೬ ಪ್ರಾಣಿಗಳ ಹೆಸರು. ಜಾತಿಃ ಜಾತಂ ಸಾಮಾನ್ಯಂ – ೩

ಜಾತಿರ್ಜಾತಂ ಚ ಸಾಮಾನ್ಯಂ ವ್ಯಕ್ತಿಸ್ತು ಪೃಥಗಾತ್ಮಿಕಾ ।
ಚಿತ್ತಂ ತು ಚೇತೋ ಹೃದಯಂ ಸ್ವಾಂತಂ ಹೃನ್ಮಾನಸಂ ಮನಃ ॥

ಇತಿ ಕಾಲವರ್ಗಃ

## ಧೀವರ್ಗಃ ೫

ಬುದ್ಧಿರ್ಮನೀಷಾ ಧಿಷಣಾ ಧೀಃ ಪ್ರಜ್ಞಾ ಶೇಮುಷೀ ಮತಿಃ ।
ಪ್ರೇಕ್ಷೋಪಲಬ್ಧಿಶ್ಚಿತ್ ಸಂವಿತ್ ಪ್ರತಿಪದ್ ಜ್ಞಪ್ತಿ ಚೇತನಾಃ ॥ ೧೪೦ ॥
ಧೀರ್ಧಾರಣಾವತೀ ಮೇಧಾ ಸಂಕಲ್ಪಃ ಕರ್ಮ ಮಾನಸಮ್ ।
ಚಿತ್ತಾಭೋಗೋ ಮನಸ್ಕಾರಶ್ಚರ್ಚಾ ಸಂಖ್ಯಾ ವಿಚಾರಣಾ ॥ ೧೪೧ ॥
ಅಧ್ಯಾಹಾರಸ್ತರ್ಕ ಊಹೋ ವಿಚಿಕಿತ್ಸಾ ತು ಸಂಶಯಃ ।
ಸಂದೇಹದ್ವಾಪರೌ ಚಾಥ ಸಮೌ ನಿರ್ಣಯನಿಶ್ಚಯೌ ॥ ೧೪೨ ॥

---

ಜಾತಿಯ ಹೆಸರು. ವ್ಯಕ್ತಿಃ — ಜಾತಿಗೆ ಆಶ್ರಯವಾದ ಪದಾರ್ಥ. ಚಿತ್ತಂ ಚೇತಃ (ಸಾಂತ ನಪುಂ) ಹೃದಯಂ ಸ್ವಾಂತಂ ಹೃತ್ (ದಾಂತ ನಪುಂ) ಮಾನಸಂ ಮನಃ (ಸಾಂತ ನಪುಂ)—೭ ಮನಸ್ಸಿನ ಹೆಸರು. ॥೧೩೯॥

ಕಾಲವರ್ಗ ಮುಗಿದಿದೆ

ಬುದ್ಧಿಃ ಮುನೀಷಾ ದಿಷಣಾ ಧೀಃ (ಈಕಾರಾಂತ ಸ್ತ್ರೀ) ಪ್ರಜ್ಞಾ ಶೇಮುಷೀ ಮತಿಃ ಪ್ರೇಕ್ಷಾ ಉಪಲಬ್ಧಿಃ ಚಿತ್ ಸಂವಿತ್ (ತಾಂತ ಸ್ತ್ರೀ) ಪ್ರತಿಪತ್ (ದಾಂತ) ಜ್ಞಪ್ತಿಃ ಚೇತನಾ — ೧೪ ಬುದ್ಧಿಯ ಹೆಸರು ಮೇಧಾ —೧ ಧಾರಣಾವತೀ ಧೀಃ — ಅಧಿಕ ಜ್ಞಾಪಕಶಕ್ತಿಯುಳ್ಳ ಬುದ್ಧಿ. ಸಂಕಲ್ಪಃ— ೧ ಮಾನಸಂ ಕರ್ಮ — ಮನೋವ್ಯಾಪಾರದ ಹೆಸರು.

ಮನಸ್ಕಾರಃ — ೧ ಚಿತ್ತಾಭೋಗಃ —ಮನಸ್ಸಿನ ವಿಶಾಲತೆ. ಸುಖಾದಿ ಇಚ್ಛೆಯಲ್ಲಿ ತತ್ಪರವಾದ ಮನಸ್ಸು. ಚರ್ಚಾ ಸಂಖ್ಯಾ ವಿಚಾರಣಾ —೩ ಪ್ರಮಾಣದಿಂದ ವಸ್ತುವನ್ನು ಪರೀಕ್ಷಿಸುವಿಕೆ. ಅಧ್ಯಾಹಾರಃ ತರ್ಕಃ ಊಹಃ — ೩ ಕೊರತೆಯಾದ ಅರ್ಥವನ್ನು ಪೂರೈಸಿ ವಾಕ್ಯ ಸಮನ್ವಯ ಮಾಡುವುದಕ್ಕೆ ಉಚಿತವಾದ ಪದವನ್ನು ತಂದುಕೊಳ್ಳುವುದು, ಅರ್ಥ ಪೂರ್ತಿಯನ್ನು ಮಾಡುವಿಕೆ. ವಿಚಿಕಿತ್ಸಾ ಸಂಶಯಃ ಸಂದೇಹಃ ದ್ವಾಪರಃ — ೪ ಒಂದನ್ನು ಬಹುಬಗೆಯಾಗಿ ತಿಳಿದು ನಿಶ್ಚಯವಿಲ್ಲದಿರುವುದು, ಸಂದೇಹಜ್ಞಾನ. ನಿರ್ಣಯಃ ನಿಶ್ಚಯಃ—೨ ನಿಶ್ಚಯದ ಹೆಸರು.

ಮಿಥ್ಯಾದೃಷ್ಟಿರ್ನಾಸ್ತಿಕತಾ ವ್ಯಾಪಾದೋ ದ್ರೋಹಚಿಂತನಮ್ ।
ಸಮೌ ಸಿದ್ಧಾಂತರಾದ್ಧಾಂತೌ ಭ್ರಾಂತಿರ್ಮಿಥ್ಯಾಮತಿರ್ಭ್ರಮಃ ॥ ೧೪೩ ॥
(ಸಮೌ ಸಂಕೇತಸಮಯೌ ಪ್ರತಿಪತ್ತಿರ್ವಿಹಸ್ತಥಾ)
ಸಂವಿದಾಗೂಃ ಪ್ರತಿಜ್ಞಾನಂ ನಿಯಮಾಶ್ರವಸಂಶ್ರವಾಃ ।
ಅಂಗೀಕಾರಾಭ್ಯುಪಗಮಪ್ರತಿಶ್ರವಸಮಾಧಯಃ ॥ ೧೪೪ ॥
ಮೋಕ್ಷೇ ಧೀರ್ಜ್ಞಾನ ಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ ।
ಮುಕ್ತಿಃ ಕೈವಲ್ಯನಿರ್ವಾಣಶ್ರೇಯೋನಿಃಶ್ರೇಯಸಾಮೃತಮ್ ॥ ೧೪೫ ॥
ಮೋಕ್ಷೋಽಪವರ್ಗೋಽಥಾಜ್ಞಾನಮವಿದ್ಯಾಹಂಮತಿಃ ಸ್ತ್ರಿಯಾಂ ।
ರೂಪಂ ಶಬ್ದೋ ಗಂಧರಸಸ್ಪರ್ಶಾಶ್ಚ ವಿಷಯಾ ಅಮೀ ॥ ೧೪೬ ॥
ಗೋಚರಾ ಇಂದ್ರಿಯಾರ್ಥಾಶ್ಚ ಹೃಷೀಕಂ ವಿಷಯೀಂದ್ರಿಯಮ್ ।
ಕರ್ಮೇಂದ್ರಿಯಂತು ಪಾಯ್ವಾದಿ ಮನೋನೇತ್ರಾದಿ ಧೀಂದ್ರಿಯಂ ॥ ॥ ೧೪೭ ॥

---

ಮಿಥ್ಯಾದೃಷ್ಟಿಃ ನಾಸ್ತಿಕತಾ ೨ ಪರಲೋಕವಿಲ್ಲವೆಂಬ ಅಪ್ರಾಮಾಣಿಕ ಬುದ್ಧಿ. ವ್ಯಾಪಾದಃ ದ್ರೋಹಚಿಂತನಂ — ೨ ದ್ರೋಹ ಮಾಡಬೇಕೆಂಬ ಕೆಟ್ಟ ಇಚ್ಛೆ. ಸಿದ್ಧಾಂತಃ ರಾದ್ಧಾಂತಃ — ೨ ಸಿದ್ಧಾಂತ, ಸಾಧಿಸಿದ ಅಭಿಮತ ಭ್ರಾಂತಿಃ ಮಿಥ್ಯಾಮತಿಃ ಭ್ರಮಃ — ೩ ಒಂದನ್ನು ಮತ್ತೊಂದಾಗಿ ತಿಳಿಯುವಿಕೆ ಸಂವಿತ್ (ತಾಂತ) ಆಗೂಃ ಪ್ರತಿಜ್ಞಾನಂ ನಿಯಮಃ ಆಶ್ರವಃ ಸಂಶ್ರವಃ ಅಂಗೀಕಾರಃ ಅಭ್ಯುಪಗಮಃ ಪ್ರತಿಶ್ರವಃ ಸಮಾಧಿಃ (ಪುಲ್ಲಿಂಗ) —೧೦ ಅಂಗೀಕಾರ ಒಪ್ಪುವಿಕೆ. ॥೧೪೪॥

ಜ್ಞಾನಂ —ಮೋಕ್ಷೇ ಧೀಃ – ಮೋಕ್ಷವಿಷಯಕವಾದ ಬುದ್ಧಿ. ಆಸ್ತಿಕ್ಯದಿಂದ ವಿರಕ್ತಿ- ವಿಜ್ಞಾನಂ – ಅನ್ಯತ್ರ ಶಿಲ್ಪಶಾಸ್ತ್ರಯೋಃ – ಮೋಕ್ಷಕ್ಕಿಂತ ಇತರವಾದ ಶಾಸ್ತ್ರಜ್ಞಾನ, ಶಿಲ್ಪಜ್ಞಾನಕ್ಕೂ ಹೆಸರು. ಮುಕ್ತಿಃ ಕೈವಲ್ಯಂ ನಿರ್ವಾಣಂ ಶ್ರೇಯಃ (ಸಾಂತ ನಪುಂ) ನಿಶ್ರೇಯಸಂ ಅಮೃತಂ ಮೋಕ್ಷಃ ಅಪವರ್ಗಃ — ೮ ಮೋಕ್ಷ, ಶಾಶ್ವತ ಸುಖ. ಅವಿದ್ಯಾಬಂಧ ನಿವೃತ್ತಿ. ಅಜ್ಞಾನಂ ಅವಿದ್ಯಾ ಅಹಂಮತಿಃ —೩ ಅಜ್ಞಾನ; ದೇಹಾತ್ಮ ಭ್ರಾಂತಿ. ವಿಷಯಾಃ ಗೋಚರಾಃ ಇಂದ್ರಿಯಾರ್ಥಾಃ — ರೂಪ ಶಬ್ದ ಗಂಧ ರಸ ಸ್ಪರ್ಶಗಳೆಂಬ ಇಂದ್ರಿಯ ಗಳಿಗೆ ಗೋಚರಿಸುವ ವಸ್ತುಗಳು. ಹೃಷೀಕಂ ವಿಷಯಿ (ನಾಂತ ನಪುಂ) ಇಂದ್ರಿಯಂ — ೩ ಇಂದ್ರಿಯಗಳ ಸಾಮಾನ್ಯ ನಾಮ. ಕರ್ಮೇಂದ್ರಿಯಂ — ೧ ಪಾಯು ಉಪಸ್ಥ ವಾಕ್ ಪಾಣಿ ಪಾದಗಳೆಂಬ ಐದು ಕರ್ಮೇಂದ್ರಿಯಗಳು ಧೀಂದ್ರಿಯಂ — ೧ ಮನಸ್ಸು ನೇತ್ರ ಜಿಹ್ವಾ ಘ್ರಾಣ ತ್ವಕ್ ಶ್ರೋತ್ರ ಗಳೆಂಬ ಜ್ಞಾನೇಂದ್ರಿಯ. ತುವರಃ ಕಷಾಯಃ — ೨ ವಗರಾದ (ಒಗಚು) ರಸ.

ತುವರಸ್ತು ಕಷಾಯೋಽಸ್ತ್ರೀ ಮಧುರೋ ಲವಣಃ ಕಟುಃ ।
ತಿಕ್ತೋಽಮ್ಲಶ್ಚ ರಸಾಃ ಪುಂಸಿ ತದ್ವತ್ಸು ಷಡಮೀ ತ್ರಿಷು ॥ ೧೪೮ ॥
ವಿಮರ್ದೋತ್ಥೇ ಪರಿಮಳೋ ಗಂಧೇ ಜನಮನೋಹರೇ ।
ಆಮೋದಸ್ಸೋಽತಿ ನಿರ್ಹಾರೀ ವಾಚ್ಯಲಿಂಗತ್ವಮಾಗುಣಾತ್ ॥ ೧೪೯ ॥
ಸಮಾಕರ್ಷೀತು ನಿರ್ಹಾರೀ ಸುರಭಿರ್ಘ್ರಾಣತರ್ಪಣಃ ।
ಇಷ್ಟಗಂಧಃ ಸುಗಂಧಿಸ್ಸ್ಯಾದಾಮೋದೀ ಮುಖವಾಸನಃ ॥ ೧೫೦ ॥
ಪೂತಿಗಂಧಸ್ತು ದುರ್ಗಂಧೋ ವಿಸ್ರಂ ಸ್ಯಾದಾಮಗಂಧಿಯತ್ ।
ಶುಕ್ಲಶುಭ್ರಶುಚಿಶ್ವೇತವಿಶದಶ್ಶ್ಯೇತಪಾಂಡರಾಃ ॥ ೧೫೧ ॥
ಅವದಾತಸ್ಸಿತೋ ಗೌರೋ ವಳಕ್ಷೋ ಧವಳೋಽರ್ಜುನಃ ।
ಹರಿಣಃ ಪಾಂಡುರಃ ಪಾಂಡುರೀಷತ್ಪಾಂಡುಸ್ತು ಧೂಸರಃ ॥ ೧೫೨ ॥
ಕೃಷ್ಣೇ ನೀಲಾಸಿತಶ್ಯಾಮಕಾಲಶ್ಯಾಮಲಮೇಚಕಾಃ ।
ಪೀತೋ ಗೌರೋ ಹರಿದ್ರಾಭಃ ಪಾಲಾಶೋ ಹರಿತೋ ಹರಿತ್ ॥೧೫೩॥

---

ಮಧುರಃ — ಸಿಹಿರಸ, ಲವಣಃ — ಉಪ್ಪು, ಕಟುಃ — ಕಾರ. ತಿಕ್ತಃ — ಕಹಿ. ಆಮ್ಲಃ — ಹುಳಿ. ಇವು ರಸವಾಚಕವಾದರೆ ಪುಲಿಂಗದಲ್ಲಿಯೂ ರಸವುಳ್ಳ ವಸ್ತುವಾಚಕವಾದರೆ ತ್ರಿಲಿಂಗಗಳಲ್ಲಿಯೂ ಇರುತ್ತವೆ. ಪರಿಮಳಃ — ೧ ಅನೇಕ ಪದಾರ್ಥಗಳನ್ನು ಕುಟ್ಟುವುದರಿಂದ ಉಂಟಾದ ಸುಗಂಧ. ಆಮೋದಃ — ಸಃ ಅತಿನಿರ್ಹಾರೀ — ಬಹುದೂರದವರೆಗೆ ವ್ಯಾಪಿಸುವ ಸುವಾಸನೆ. ಆಗುಣಾತ್ ವಾಚ್ಯಲಿಂಗತ್ವಂ — ಇಲ್ಲಿಂದ ಆರಂಭಿಸಿ ಶುಕ್ಲಾದಿ ಗುಣಗಳ ವರೆಗೆ ಹೇಳುವವುಗಳು ವಿಶೇಷ್ಯಲಿಂಗವನ್ನು ಹೊಂದುತ್ತವೆ. ॥ ೧೪೯ ॥

ಸಮಾಕರ್ಷೀ (ನಾಂತ) ನಿರ್ಹಾರೀ (ನಾಂತ) ದೂರವಾಗಿ ವ್ಯಾಪಿಸುವ ಗಂಧವುಳ್ಳ ದ್ರವ್ಯ. ಸುರಭಿಃ ಘ್ರಾಣತರ್ಪಣಃ ಇಷ್ಟಗಂಧಃ ಸುಗಂಧಿಃ — ೪ ಪರಿಮಳದ್ರವ್ಯದ ಹೆಸರು. ಆಮೋದೀ (ನಾಂತ) ಮುಖವಾಸನಃ – ೨ ಪಚ್ಚಕರ್ಪೂರ ಮುಂತಾದ ಮುಖಪರಿಮಳ ದ್ರವ್ಯ. ಪೂತಿಗಂಧಃ ದುರ್ಗಂಧಃ – ೨ ಕೆಟ್ಟ ವಾಸನೆಯುಳ್ಳ ವಸ್ತು.

ವಿಸ್ರಂ ಆಮಗಂಧಿ (ನಾಂತ ನಪುಂ) – ೨ ಅಪಕ್ವವಾಗಿ ಕೆಟ್ಟ ವಾಸನೆಯುಳ್ಳ ದ್ರವ್ಯ. ಶುಕ್ಲಃ ಶುಭ್ರಃ ಶುಚಿಃ ಶ್ವೇತಃ ವಿಶದಃ ಶ್ಯೇತಃ ಪಾಂಡರಃ ಅವದಾತಃ ಸಿತಃ ಗೌರಃ ವಳಕ್ಷಃ ಧವಳಃ ಅರ್ಜುನಃ – ೧೩ ಬಿಳುಪು ಬಣ್ಣದ ಹೆಸರು. ಹರಿಣಃ ಪಾಂಡುರಃ ಪಾಂಡುಃ – ೩ ಬಿಳುಪು ಪಚ್ಚೆ ಎರಡೂ ಬೆರೆತ ಬಣ್ಣ. ಧೂಸರಃ – ಎಳೆಬಿಳುಪು, ಸ್ವಲ್ಪ ಬೆಳ್ಳಗಾದುದು. ಕೃಷ್ಣಃ ನೀಲಃ ಅಸಿತಃ ಶ್ಯಾಮಃ ಕಾಲಃ ಶ್ಯಾಮಲಃ ಮೇಚಕಃ – ೭ ಕಪ್ಪು ಬಣ್ಣ.

ಲೋಹಿತೋ ರೋಹಿತೋ ರಕ್ತಃ ಶೋಣಃ ಕೋಕನದಚ್ಛವಿಃ ।
ಅವ್ಯಕ್ತರಾಗಸ್ತ್ವರುಣಃ ಶ್ವೇತರಕ್ತಸ್ತು ಪಾಟಲಃ ॥ ೧೫೪ ॥
ಶ್ಯಾವಸ್ಸ್ಯಾತ್ಕಪಿಶೋ ಧೂಮ್ರಧೂಮಲೌ ಕೃಷ್ಣಲೋಹಿತೇ ।
ಕಡಾರಃ ಕಪಿಲಃ ಪಿಂಗಪಿಶಂಗೌ ಕದ್ರುಪಿಂಗಲೌ ॥ ೧೫೫ ॥
ಚಿತ್ರಂ ಕಿರ್ಮೀರಕಲ್ಮಾಷಶಬಲೈತಾಶ್ಚ ಕರ್ಬುರೇ ।
ಗುಣೇ ಶುಕ್ಲಾದಯಃ ಪುಂಸಿ ಗುಣಿಲಿಂಗಾಸ್ತು ತದ್ವತಿ ॥ ೧೫೬ ॥

ಇತಿ ಧೀವರ್ಗಃ

## ವಾಗ್ವರ್ಗಃ ೬

ಬ್ರಾಹ್ಮೀ ತು ಭಾರತೀ ಭಾಷಾ ಗೀರ್ವಾಗ್ವಾಣೀ ಸರಸ್ವತೀ ।
ವ್ಯಾಹಾರ ಉಕ್ತಿರ್ಲಪಿತಂ ಭಾಷಿತಂ ವಚನಂ ವಚಃ ॥ ೧೫೭ ॥

---

ಪೀತಃ ಗೌರಃ ಹರಿದ್ರಾಭಃ – ೩ ಹಳದಿ ಬಣ್ಣ. ಪಾಲಾಶಃ ಹರಿತಃ ಹರಿತ್ – ೩ ಎಲೆ ಹಸುರು ಬಣ್ಣ. ॥ ೧೫೩ ॥

ಲೋಹಿತಃ ರೋಹಿತಃ ರಕ್ತಃ – ೩ ಕೆಂಪು ಬಣ್ಣ. ಶೋಣಃ ಕೋಕನದಚ್ಛವಿಃ – ೨ ಕೆಂದಾವರೆ ಬಣ್ಣ. ಅರುಣಃ ಅವ್ಯಕ್ತರಾಗಃ – ಎಳೆಗೆಂಪು ಬಣ್ಣ. ಶ್ವೇತರಕ್ತಃ ಪಾಟಲಃ – ಬಿಳುಪು ಬೆರೆತಿರುವ ಕೆಂಪು ಬಣ್ಣ. ಶ್ಯಾವಃ ಕಪಿಶಃ ಅರಸಿನ ಸೇರಿದ (ಪಚ್ಚ) ಕೆಂಪು, ಬಣ್ಣ. ಧೂಮ್ರಃ ಧೂಮಲಃ ಕೃಷ್ಣಲೋಹಿತಃ – ೩ ಕಪ್ಪು ಬೆರೆತ ಕೆಂಪು, ಕಾರ್ಮುಗಿಲ ಬಣ್ಣ. ಕಡಾರಃ ಕಪಿಲಃ ಪಿಂಗಃ ಪಿಶಂಗಃ ಕದ್ರುಃ ಪಿಂಗಲಃ - ೬ ಗೋರೋಚನದಂತೆ ಕೆಂಪು ಬೆರೆತ ಹಳದಿ. ಚಿತ್ರಂ ಕಿಮ್ಮೀ (ರ್ಮೀ) ರಃ ಕಲ್ಮಾಷಃ ಶಬಲಃ ಏತಃ ಕರ್ಬುರಃ – ೬ ಚಿತ್ರಬಣ್ಣ, ನಾನಾ ಬಣ್ಣಗಳು ಸೇರಿ ಆಗಿರುವ ಬಣ್ಣ. ಶುಕ್ಲವನ್ನಾರಂಭಿಸಿ ಕರ್ಬುರದ ವರೆಗೆ ಹೇಳಿರುವ ಶಬ್ದಗಳು ಗುಣವನ್ನು ಹೇಳುವಾಗ ಪುಲ್ಲಿಂಗಗಳೂ ಗುಣವುಳ್ಳ ವಸ್ತುವನ್ನು ಹೇಳುವಾಗ ವಿಶೇಷ್ಯ ಲಿಂಗಗಳನ್ನೂ ಹೊಂದುತ್ತವೆ. ॥ ೧೫೫ ॥

ಧೀವರ್ಗ ಮುಗಿದಿದೆ.

ಬ್ರಾಹ್ಮೀ ಭಾರತೀ ಭಾಷಾ ಗೀಃ (ರೇಫಾಂತ ಸ್ತ್ರೀ) ವಾಕ್ (ಚಾಂತಸ್ತ್ರೀ) ವಾಣೀ ಸರಸ್ವತೀ ವ್ಯಾಹಾರಃ ಉಕ್ತಿಃ ಲಪಿತಂ ಭಾಷಿತಂ ವಚನಂ ವಚಃ – ೧೩ ಮಾತಿನ ಹೆಸರು. ಮೊದಲಿನಿಂದ ೭ ಶಬ್ದಗಳು ಸರಸ್ವತಿಯ ಹೆಸರು.

ಅಪಭ್ರಂಶೋಽಪಶಬ್ದಸ್ಸ್ಯಾಚ್ಛಾಸ್ತ್ರೇ ಶಬ್ದಸ್ತು ವಾಚಕಃ ||
ತಿಙ್ಸುಬಂತಚಯೋ ವಾಕ್ಯಂ ಕ್ರಿಯಾ ವಾ ಕಾರಕಾನ್ವಿತಾ ||೧೫೮||
ಶ್ರುತಿಃ ಸ್ತ್ರೀ ವೇದ ಆಮ್ನಾಯಸ್ತ್ರಯೀ ಧರ್ಮಸ್ತು ತದ್ವಿಧಿಃ |
ಸ್ತ್ರಿಯಾಮೃಕ್ಸಾಮಯಜುಷೀ ಇತಿ ವೇದಾಸ್ತ್ರಯಸ್ತ್ರಯೀ ||೧೫೯||
ಶಿಕ್ಷೇತ್ಯಾದಿ ಶ್ರುತೇರಂಗಮೋಂಕಾರಪ್ರಣವೌ ಸಮೌ |
(ಶಿಕ್ಷಾ ವ್ಯಾಕರಣಂ ಛಂದೋ ನಿರುಕ್ತಂ ಜ್ಯೌತಿಷಂ ತಥಾ |
ಕಲ್ಪಶ್ಚೇತಿ ಷಡಂಗಾನಿ ವೇದಸ್ಯಾಹುರ್ಮನೀಷಿಣಃ)
ಇತಿಹಾಸಃ ಪುರಾವೃತ್ತಮುದಾತ್ತಾದ್ಯಾಸ್ತ್ರಯಃಸ್ವರಾಃ ||೧೬೦||
ಆನ್ವೀಕ್ಷಿಕೀ ದಂಡನೀತಿಸ್ತರ್ಕವಿದ್ಯಾರ್ಥಶಾಸ್ತ್ರಯೋಃ |
ಆಖ್ಯಾಯಿಕೋಪಲಬ್ಧಾರ್ಥಾ ಪುರಾಣಂ ಪಂಚಲಕ್ಷಣಮ್ ||೧೬೧||
(ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿಚ |
ವಂಶಾನುಚರಿತಂ ಚೇತಿ ಲಕ್ಷಣಾನಾಂ ತು ಪಂಚಕಮ್)

---

ಆಗುತ್ತವೆ. ಅಪಭ್ರಂಶಃ ಅಪಶಬ್ದಃ — ೨ ವ್ಯಾಕರಣಪರಿಶುದ್ಧವಲ್ಲದ ಅಪಶಬ್ದ. ಶಬ್ದಃ— ೧ ಶಾಸ್ತ್ರೇವಾಚಕಃ — ಅರ್ಥವನ್ನು ಹೇಳುವ ಸಾಧು ಶಬ್ದ. ವಾಕ್ಯಂ — ೧ ನಾಮಪದ (ಸುಬಂತ) ಕ್ರಿಯಾಪದಗಳ (ತಿಙಂತ) ಗುಂಪು ಕಾರಕಾನ್ವಿತಾ ಕ್ರಿಯಾ ವಾ — ಕರ್ತೃಕರ್ಮಾದಿ ಕಾರಕಗಳಿಂದ ಅನ್ವಿತವಾದ ಕ್ರಿಯೆಯನ್ನು ಹೇಳುವುದು ವಾಕ್ಯ. ಕ್ರಿಯಾಕಾರಕಗಳಿಗೆ ನಿತ್ಯಸಂಬಂಧವಿರುತ್ತದೆ. ಶ್ರುತಿಃ(ಸ್ತ್ರೀ) ವೇದಃ ಆಮ್ನಾಯಃ — ೩ ತ್ರಯೀ — ಋಗ್ವೇದಾದಿ ವೇದಗಳ ಹೆಸರು. ಧರ್ಮಃ — ೧ ವೇದದಲ್ಲಿ ಹೇಳಿದ ಯಾಗಾದಿ ಕರ್ಮಗಳು. ಋಕ್ (ಚಾಂತ ಸ್ತ್ರೀ) ಸಾಮ (ನಾಂತ ನಪುಂ) ಯಜುಃ (ಸಾಂತ ನಪುಂ) ಕ್ರಮವಾಗಿ ಋಗ್ವೇದ ಸಾಮವೇದ ಯಜುರ್ವೇದಗಳ ಹೆಸರು. ತ್ರಯೀ — ೧ ಮೂರು ವೇದಗಳು. (ಅಥರ್ವಣಕ್ಕೆ ಗ್ರಹಣವಿಲ್ಲ) ಶಿಕ್ಷಾ ಮುಂತಾದವುಗಳು ೬ ವೇದಾಂಗಗಳು. (ಶಿಕ್ಷಾ ವ್ಯಾಕರಣಂ ಛಂಧಃ (ಸಾಂತ ನಪುಂ) ನಿರುಕ್ತಂ ಜ್ಯೌತಿಷಂ ಕಲ್ಪಃ — ಇವು ೬ ವೇದಾಂಗಗಳು. ಓಂಕಾರಃ ಪ್ರಣವಃ — ೨ ಪ್ರಣವದ ಹೆಸರು. ಇತಿಹಾಸಃ ಪುರಾವೃತ್ತಂ — ೨ ಭಾರತ ಮುಂತಾದ ಪುರಾತನ ಕಥೆಗಳು. ಸ್ವರಾಃ — ಉದಾತ್ತ ಅನುದಾತ್ತ ಸ್ವರಿತವೆಂಬ ಸ್ವರಗಳು. ಆನ್ವೀಕ್ಷಿಕೀ — ೧ ನ್ಯಾಯಶಾಸ್ತ್ರದ ಹೆಸರು. ದಂಡನೀತಿಃ ಅರ್ಥಶಾಸ್ತ್ರದ ನೀತಿಶಾಸ್ತ್ರದ ಹೆಸರು. ಆಖ್ಯಾಯಿಕಾ ಉಪಲಬ್ಧಾರ್ಥಾ — ಸತ್ಯವಾದ ಚರಿತ್ರೆಯುಳ್ಳ ಗ್ರಂಥ. ಪುರಾಣಂ ಪಂಚಲಕ್ಷಣಂ — ೨ ಸ್ಕಾಂದಾದಿ ಪುರಾಣದ ಹೆಸರು. (ಸರ್ಗ ಪ್ರತಿಸರ್ಗ ವಂಶ ಮನ್ವಂತರ ವಂಶಾನುಚರಿತ (ಭೂಮ್ಯಾದಿಸಂಸ್ಥಾನ) ವೆಂದು ೫ ಲಕ್ಷಣಗಳಿಂದ ಕೂಡಿದ ಪುರಾಣಗಳು.) || ೧೬೨ ||

ಪ್ರಬಂಧಕಲ್ಪನಾ ಕಥಾಪ್ರವಹ್ಲಿಕಾ ಪ್ರಹೇಳಿಕಾ ।
ಸ್ಮೃತಿಸ್ತು ಧರ್ಮಸಂಹಿತಾಸಮಾಹೃತಿಸ್ತುಸಂಗ್ರಹಃ ॥೧೬೩॥

ಸಮಸ್ಯಾ ತು ಸಮಾಸಾರ್ಥಾ ಕಿಂವದಂತೀ ಜನಶ್ರುತಿಃ ।
ವಾರ್ತಾಪ್ರವೃತ್ತಿರ್ವೃತ್ತಾಂತ ಉದಂತಸ್ಸ್ಯಾದಥಾಹ್ವಯಃ ॥೧೬೪॥

ಆಖ್ಯಾಹ್ವೇ ಅಭಿದಾನಂ ಚ ನಾಮಧೇಯಂ ಚ ನಾಮ ಚ ।
ಹೂತಿರಾಕಾರಣಾಹ್ವಾನಂ ಸಂಹೂತಿರ್ಬಹುಭಿಃ ಕೃತಾ ॥೧೬೫॥

ವಿವಾದೋ ವ್ಯವಹಾರಸ್ಸ್ಯಾ ದುಪನ್ಯಾಸಸ್ತು ವಾಙ್ಮುಖಮ್ ।
ಉಪೋದ್ಘಾತ ಉದಾಹಾರಃ ಶಪನಂ ಶಪಥಃ ಪುಮಾನ್ ॥೧೬೬॥

ಪ್ರಶ್ನೋಽನುಯೋಗಃ ಪೃಚ್ಛಾ ಚ ಪ್ರತಿವಾಕ್ಯೋತ್ತರೇ ಸಮೇ ।
ಮಿಥ್ಯಾಭಿಯೋಗೋಽಭ್ಯಾಖ್ಯಾನಮಥಮಿಥ್ಯಾಭಿಶಂಸನಮ್ ॥೧೬೭॥

ಅಭಿಶಾಪಃ ಪ್ರಣಾದಸ್ತುಶಬ್ದ ಸ್ಸ್ಯಾದನುರಾಗಜಃ ।

---

ಪ್ರಬಂಧಕಲ್ಪನಾ ಕಥಾ — ೨ ಕೆಲವು ಅಂಶದಲ್ಲಿ ಮಾತ್ರ ಸತ್ಯವಾದ ಕಲ್ಪಿತ ಕಥೆಯ ಹೆಸರು. ಪ್ರವಹ್ಲಿಕಾ ಪ್ರಹೇಳಿಕಾ — ೨ ಗೂಢಾರ್ಥವುಳ್ಳ ಗ್ರಂಥ, ಸಮಸ್ಯಾ ಗ್ರಂಥ. ಸ್ಮೃತಿಃ ಧರ್ಮ ಸಂಹಿತಾ — ೨ ಮನುಸ್ಮೃತಿ ಮುಂತಾದ ಧರ್ಮ ಶಾಸ್ತ್ರಗಳು. - ಸಮಾಹೃತಿಃ ಸಂಗ್ರಹಃ — ೨ ಅನೇಕ ಶಾಸ್ತ್ರಗಳಲ್ಲಿ ಹೇಳಿದ ಅನೇಕಾರ್ಥಗಳನ್ನು ಒಂದೇ ಕಡೆ ಸಂಕ್ಷೇಪದಿಂದ ಹೇಳಿದ ಗ್ರಂಥದ ಹೆಸರು. ಸಮಸ್ಯಾ ಸಮಾಸಾರ್ಥಾ — ೨ ಕವಿಶಕ್ತಿ ಪರೀಕ್ಷೆಗೋಸ್ಕರ ಕೊಡಲ್ಪಡುವ ಪದ್ಯದ ಭಾಗ. ಕಿಂವದಂತೀ ಜನಶ್ರುತಿಃ — ೨ ಲೋಕವಾರ್ತೆ, ಲೋಕಪ್ರವಾದ. ವಾರ್ತಾ ಪ್ರವೃತ್ತಿಃ ವೃತ್ತಾಂತಃ ಉದಂತಃ — ೪ ವೃತ್ತಾಂತದ ಹೆಸರು. ಆಹ್ವಯಃ ಆಖ್ಯಾ ಆಹ್ವಾ ಅಭಿಧಾನಂ ನಾಮಧೇಯಂ ನಾಮ (ನಾಂತ ನಪುಂ) – ೬ ನಾಮಧೇಯ- ಹೆಸರು. ಹೂತಿಃ ಆಕಾರಣಾ ಆಹ್ವಾನಂ - ೩ ಕರೆಯುವಿಕೆ. ಸಂಹೂತಿಃ – ೧ ಅನೇಕರು ಸೇರಿ ಕರೆಯುವುದು. ವಿವಾದಃ ವ್ಯವಹಾರಃ - ೨ ಕಲಹದ ಹೆಸರು, ವಿವಾದ ಉಪನ್ಯಾಸಃ ವಾಙ್ಮುಖಂ – ೨ ವಾಕ್ಯಾರಂಭದ ಹೆಸರು. ಉಪೋದ್ಘಾತಃ ಉದಾಹಾರಃ – ೨ ನಿದರ್ಶನ ಅಂದರೆ ಉದಾಹರಣೆ ತೋರಿಸುವಿಕೆ. ಶಪನಂ ಶಪಥಃ – ೨ ಆಣೆ ಇಟ್ಟುಕೊಳ್ಳುವುದು. ಪ್ರಶ್ನಃ ಅನುಯೋಗಃ ಪೃಚ್ಛಾ - ೩ ಪ್ರಶ್ನೆ ಕೇಳುವುದು. ಪ್ರತಿವಾಕ್ಯಂ ಉತ್ತರಂ – ೨ ಉತ್ತರ ಕೊಡುವಿಕೆ. ಮಿಥ್ಯಾಭಿಯೋಗಃ ಅಭ್ಯಾಖ್ಯಾನಂ – ೨ ಇಲ್ಲದ್ದನ್ನು ಕಲ್ಪಿಸಿ ಆಕ್ಷೇಪಣೆ ಮಾಡುವುದು. ಮಿಥ್ಯಾಭಿಶಂಸನಂ – ಅಭಿಶಾಪಃ – ೨ ಇಲ್ಲದ್ದನ್ನು ಕಲ್ಪಿಸಿ ಚಾಡಿ ಹೇಳುವುದು. ॥ ೧೬೭ ॥

ಪ್ರಣಾದಃ – ೧ ಅನುರಾಗಜಃ ಶಬ್ದಃ - ವಿಶ್ವಾಸದಿಂದ ನುಡಿಯುವಿಕೆ.

ಯಶಃ ಕೀರ್ತಿಃ ಸಮಜ್ಞಾ ಚ ಸ್ತವಃ ಸ್ತೋತ್ರಂ ಸ್ತುತಿರ್ನುತಿಃ ॥
ಆಮ್ರೇಡಿತಂದ್ವಿಸ್ತ್ರಿರುಕ್ತಮುಚ್ಚೈರ್ಘುಷ್ಟಂ ತು ಘೋಷಣಾ ।
ಕಾಕುಃ ಸ್ತ್ರಿಯಾಂ ವಿಕಾರೋ ಯಶ್ಶೋಕಭೀತ್ಯಾದಿಭಿರ್ಧ್ವನೇಃ ॥೧೯॥

ಅವರ್ಣಾಕ್ಷೇಪ ನಿರ್ವಾದಪರಿವಾದಾಪವಾದವತ್ ।
ಉಪಕ್ರೋಶೋ ಜುಗುಪ್ಸಾ ಚ ಕುತ್ಸಾ ನಿಂದಾ ಚ ಗರ್ಹಣೇ ॥೧೨೦॥

ಪಾರುಷ್ಯಮತಿವಾದಸ್ಸ್ಯಾದ್ಭರ್ತ್ಸನಂತ್ವಪಕಾರಗೀಃ ।
ಯಸ್ಸನಿಂದ ಉಪಾಲಂಭಸ್ತತ್ರ ಸ್ಯಾತ್ಪರಿಭಾಷಣಮ್ ॥೧೨೧॥

ತತ್ರ ತ್ವಾಕ್ಷಾರಣಾ ಯಸ್ಸ್ಯಾದಾಕ್ರೋಶೋ ಮೈಥುನಂ ಪ್ರತಿ ।
ಸ್ಯಾದಾಭಾಷಣಮಾಲಾಪಃ ಪ್ರಲಾಪೋಽನರ್ಥಕಂ ವಚಃ ॥೧೨೨॥

ಅನುಲಾಪೋಮುಹುರ್ಭಾಷಾ ವಿಲಾಪಃ ಪರಿದೇವನಮ್ ।
ವಿಪ್ರಲಾಪೋ ವಿರೋಧೋಕ್ತಿಸ್ಸಂಲಾಪೋ ಭಾಷಣಂ ಮಿಥಃ ॥ ೧೨೩ ॥

---

ಯಶಃ ಕೀರ್ತಿಃ ಸಮಜ್ಞಾ – ೩ ಕೀರ್ತಿಯ ಹೆಸರು. ಸ್ತೋತ್ರಂ ಸ್ತುತಿಃ ನುತಿಃ – ೪ ಸ್ತೋತ್ರ. ಸುಗುಣಗಳನ್ನು ಕೊಂಡಾಡುವುದು. ಆಮ್ರೇಡಿತಂ – ೧ ದ್ವಿಃ ತ್ರಿಃ ಉಕ್ತಂ – ಸಂತೋಷವೇಗಾದಿಗಳಿಂದ ಹೇಳಿದ ಮಾತನ್ನೇ ಎರಡು ಮೂರು ಸಾರಿ ಹೇಳುವುದು. ಉಚ್ಚೈರ್ಘುಷ್ಟಂ ಘೋಷಣಾ – ೨ ಘಟ್ಟಿಯಾಗಿ ಕೂಗುವುದು. ಕಾಕುಃ (ಸ್ತ್ರೀ) – ದುಃಖ ಅಂಜಿಕೆ ಕಪಟ ಮುಂತಾದವುಗಳಿಂದ ಉಂಟಾದ ಧ್ವನಿವಿಕಾರ. ಅವರ್ಣಃ ಆಕ್ಷೇಪಃ ನಿರ್ವಾದಃ ಪರಿವಾದಃ ಅಪವಾದಃ ಉಪಕ್ರೋಶಃ ಜುಗುಪ್ಸಾ ಕುತ್ಸಾ ನಿಂದಾ ಗರ್ಹಣಂ – ೧೦ ನಿಂದೆಯ ಹೆಸರು. ಪಾರುಷ್ಯಂ ಅತಿವಾದಃ – ೨ ಅಪ್ರಿಯವಾಗಿ ಮೇರೆದಪ್ಪಿ ನುಡಿಯುವಿಕೆ. ಭರ್ತ್ಸನಂ – ೧ ಬೆದರಿಕೆ, ಪರನಿಗೆ ಅಂಜಿಕೆಯನ್ನುಂಟುಮಾಡುವ ಅಪಕಾರದ ಮಾತು. ಸನಿಂದಃ ಉಪಾಲಂಭಃ – ಪರಿಭಾಷಣಂ – ನಿಂದೆಯಿಂದ ಕೂಡಿದ ಕೆಟ್ಟಮಾತು. ಆಕ್ಷಾರಣಾ – ೧ ಮೈಥುನಂ ಪ್ರತಿಯಃ ಆಕ್ರೋಶಃ – ಮೈಥುನವನ್ನು ಕುರಿತು ಹಂಬಲಿಸಿ ಕೂಗುವುದು, ಮೊರೆಯಿಡುವುದು. ಆಭಾಷಣಂ ಆಲಾಪಃ – ೨ ಹಿತವಾದ. ಪ್ರಲಾಪಃ – ಪ್ರಯೋಜನವಿಲ್ಲದ ಮಾತು. ॥ ೧೨೨ ॥

ಅನುಲಾಪಃ – ೧ ಮುಹುಃ ಭಾಷಾ – ಬಾರಿ ಬಾರಿಗೂ ನುಡಿಯುವುದು. ವಿಲಾಪಃ ಪರಿದೇವನಂ – ೨ ಅಳುವಿಕೆ, ದುಃಖದಿಂದ ಹೇಳುವ ಮಾತು. ವಿಪ್ರಲಾಪಃ – ೧ ವಿರೋಧೋಕ್ತಿಃ – ವಿರೋಧವಾಗಿ ಹೇಳುವುದು. ಸಂಲಾಪಃ – ಮಿಥಃ ಭಾಷಣಂ – ಪ್ರೀತಿಯಿಂದ ಅನ್ಯೋನ್ಯವಾಗಿ ಮಾತಾಡುವುದು. ಸುಪ್ರ

ಸುಪ್ರಲಾಪಸ್ಸುವಚನಮಪಲಾಪಸ್ತು ನಿಹ್ನವಃ ।
ಸಂದೇಶವಾಗ್ವಾಚಿಕಂ ಸ್ಯಾದ್ವಾಗ್ಭೇದಾಸ್ತು ತ್ರಿಷೂತ್ತರೇ ॥ ೧೭೪ ॥

ಉಷತೀ ವಾಗಕಲ್ಯಾಣೀ ಸ್ಯಾತ್ಕಲ್ಯಾ ತು ಶುಭಾತ್ಮಿಕಾ ।
ಅತ್ಯರ್ಥಮಧುರಂ ಸಾಂತ್ವಂ ಸಂಗತಂ ಹೃದಯಂಗಮಮ್ ॥ ೧೭೫ ॥

ನಿಷ್ಠುರಂ ಪರುಷಂ ಗ್ರಾಮ್ಯಮಶ್ಲೀಲಂ ಸೂನೃತಂ ಪ್ರಿಯೇ ।
ಸತ್ಯೇಽಥ ಸಂಕುಲಕ್ಲಿಷ್ಟೇ ಪರಸ್ಪರಪರಾಹತೇ ॥ ೧೭೬ ॥

ಲುಪ್ತವರ್ಣಪದಂ ಗ್ರಸ್ತಂ ನಿರಸ್ತಂ ತ್ವರಿತೋದಿತಮ್ ।
ಅಂಬೂಕೃತಂ ಸನಿಷ್ಠೀವಮಬದ್ಧಂ ಸ್ಯಾದನರ್ಥಕಮ್ ॥ ೧೭೭ ॥

ಅನಕ್ಷರಮವಾಚ್ಯಂ ಸ್ಯಾದಾಹತಂ ತು ಮೃಷಾರ್ಥಕಮ್ ।
ಅಥ ಮ್ಲಿಷ್ಟಮವಿಸ್ಪಷ್ಟಂ ವಿತಥಂ ತ್ವನೃತಂ ವಚಃ ॥ ೧೭೮ ॥

---

ಲಾಪಃ ಸುವಚನಂ – ೨ ಪರಿಶುದ್ಧವಾದ ಮಾತು. ಅಪಲಾಪಃ ನಿಹ್ನವಃ – ೨ ಮೋಸಗೊಳಿಸುವ ಮಾತು. ಸಂದೇಶವಾಕ್ ವಾಚಿಕಂ – ೨ ಹೇಳಿಕಳುಹಿಸುವ ಮಾತು. ಉತ್ತರೇ ವಾಗ್ಭೇದಾಃ ತ್ರಿಷು – ಮುಂದೆ ಹೇಳುವ ಉಷತೀ ಮುಂತಾದ ವಾಗ್ವಿಶೇಷಗಳು (ಸಮ್ಯಕ್ ವರೆಗೆ) ಮೂರು ಲಿಂಗಗಳಲ್ಲಿಯೂ ಇರುತ್ತವೆ. ಉಷತೀ – ಅಕಲ್ಯಾಣೀ ವಾಕ್ – ಅಶುಭಕರವಾದ ಮಾತು. ಕಲ್ಯಾ – ಶುಭಾತ್ಮಿಕಾ ಸ್ಯಾತ್ – ಮಂಗಳಕರವಾದ ಮಾತು ಸಾಂತ್ವಂ – ಅತ್ಯರ್ಥಮಧುರಂ – ಬಹುಪ್ರೀತಿಕರವಾದ ವಾಕ್ಯ. ಸಂಗತಂ ಹೃದಯಂಗಮಂ – ೨ ಮನಸ್ಸಿಗೆ ಒಪ್ಪುವ ಮಾತು. ನಿಷ್ಠುರಂ ಪರುಷಂ – ೨ ಕಠಿಣವಾದ ಮಾತು. ಗ್ರಾಮ್ಯಂ ಅಶ್ಲೀಲಂ – ೨ ಪಾಮರರು ನುಡಿಯುವ ಮಾತು. ಸೂನೃತಂ – ಸತ್ಯವಾಗಿ ಪ್ರಿಯವಾದ ಮಾತು. ಸಂಕುಲಂ ಕ್ಲಿಷ್ಟಂ – ೨ ಪೂರ್ವೋತ್ತರ ವಿರುದ್ಧವಾಗಿ ಪರಸ್ಪರ ಅನ್ವಯವಿಲ್ಲದ ಕಷ್ಟ ಅರ್ಥವುಳ್ಳ ವಾಕ್ಯ. ಗ್ರಸ್ತಂ – ಲುಪ್ತವರ್ಣಪದಂ – ಅಶಕ್ತಿ ಅಥವಾ ವೇಗದಿಂದ ಹೇಳುವಾಗ ಅಕ್ಷರ ಅಥವಾ ಪದವೇ ಲೋಪ ಹೊಂದಿರುವ ವಾಕ್ಯ. ನಿರಸ್ತಂ – ವೇಗದಿಂದ ಹೇಳಿದ ಮಾತು. ಅಂಬೂಕೃತಂ – ಸನಿಷ್ಠೀವಂ – ತುಂತುರುಗಳಿಂದ ಕೂಡಿದ ವಾಕ್ಯ. ಅಬದ್ಧಂ – ಅನರ್ಥಕಂ ಸ್ಯಾತ್ – ಹೊಂದದ ಅರ್ಥವುಳ್ಳ ಮಾತು. ॥ ೧೭೭ ॥

ಅನಕ್ಷರಂ ಅವಾಚ್ಯಂ – ೨ ಹೇಳಬಾರದ ಮಾತು, ಬಯ್ಗಳು. ಆಹತಂ ಮೃಷಾರ್ಥಕಂ – ಬಹಳ ಅಸಂಭಾವಿತವಾದ ಅರ್ಥವುಳ್ಳ ಮಾತು. ಮ್ಲಿಷ್ಟಂ ಅವಿಸ್ಪಷ್ಟಂ – ೨ ಅರ್ಥ ತಿಳಿಯದಿರುವ ಮಾತು. ವಿತಥಂ – ೧ ಅನೃತಂ ವಚಃ – ಸುಳ್ಳುಮಾತು. ಸೋಲ್ಲುಂಠನಂ ಸೋತ್ಪ್ರಾಸಂ – ೨ ಹಾಸ್ಯಕರವಾದ ಮಾತು.

ಸೋಲ್ಲುಂಠನಂ ತು ಸೋತ್ಪ್ರಾಸಂ ಮಣಿತಂ ರತಿಕೂಜಿತಮ್ ।
ಸತ್ಯಂ ತಥ್ಯಮೃತಂ ಸಮ್ಯಗಮೂನಿ ತ್ರಿಷು ತದ್ವತಿ ॥ ೧೭೯ ॥

ಇತಿ ವಾಗ್ವರ್ಗಃ

ಶಬ್ದಾದಿವರ್ಗಃ ೭

ಶಬ್ದೇ ನಿನಾದನಿನದಧ್ವನಿಧ್ವಾನರವಸ್ವನಾಃ ।
ಸ್ವಾನನಿರ್ಘೋಷನಿರ್ಹ್ರಾದನಾದನಿಸ್ವಾನನಿಸ್ವನಾಃ ॥ ೧೮೦ ॥

ಆರವಾರಾವಸಂರಾವವಿರಾವಾ ಅಥ ಮರ್ಮರಃ ।
ಸ್ವನಿತೇ ವಸ್ತ್ರಪರ್ಣಾನಾಂ ಭೂಷಣಾನಾಂ ತು ಶಿಂಜಿತಮ್ ॥ ೧೮೧ ॥

ನಿಕ್ವಾಣೋ ನಿಕ್ವಣಃ ಕ್ವಾಣಃ ಕ್ವಣಃ ಕ್ವಣನಮಿತ್ಯಪಿ ।
ವೀಣಾಯಾಃ ಕ್ವಣಿತೇ ಪ್ರಾದೇಃ ಪ್ರಕ್ವಾಣಪ್ರಕ್ವಣಾದಯಃ ॥ ೧೮೨ ॥

ಕೋಲಾಹಲಃ ಕಲಕಲಸ್ತಿರಶ್ಚಾಂ ವಾಶಿತಂ ರುತಮ್ ।
ಸ್ತ್ರೀ ಪ್ರತಿಶ್ರುತ್ಪ್ರತಿಧ್ವಾನೇ ಗೀತಂ ಗಾನಮಿಮೇ ಸಮೇ ॥ ೧೮೩ ॥

ಇತಿ ಶಬ್ದಾದಿವರ್ಗಃ

---

ಮಣಿತಂ ರತಿಕೂಜಿತಂ – ೨ ರತಿಕಾಲದಲ್ಲಿ ಉಂಟಾಗುವ ಶಬ್ದ. ಸತ್ಯಂ ತಥ್ಯಂ ಋತಂ ಸಮ್ಯಕ್ (ಚಾಂತ ನಪುಂ) – ೪ ಸತ್ಯವಾಕ್ಯ. ಅಮೂನಿ ತದ್ವತಿ ತ್ರಿಷು ಇವುಗಳೆಲ್ಲವೂ ವಾಕ್ಯವುಳ್ಳವುಗಳನ್ನು ಹೇಳುವಾಗ ತ್ರಿಲಿಂಗಗಳಾಗುತ್ತವೆ. ॥ ೧೭೯ ॥

ವಾಗ್ವರ್ಗ ಮುಗಿದಿದೆ.

ಶಬ್ದಃ ನಿನಾದಃ ನಿನದಃ ಧ್ವನಿಃ ಧ್ವಾನಃ ರವಃ ಸ್ವನಃ ಸ್ವಾನಃ ನಿರ್ಘೋಷಃ ನಿರ್ಹ್ರಾದಃ ನಾದಃ ನಿಸ್ವಾನಃ ನಿಸ್ವನಃ ಆರವಃ ಆರಾವ ಸಂರಾವಃ ವಿರಾವಃ – ೧೭ ಧ್ವನಿ, ಶಬ್ದದ ಹೆಸರು. ಮರ್ಮರಃ – ವಸ್ತ್ರ ಪರ್ಣಾನಾಂ ಸ್ವನಿತೇ – ಎಲೆಗಳು ಅಥವಾ ವಸ್ತ್ರಗಳಲ್ಲಿ ಆಗುವ ಧ್ವನಿ. ಶಿಂಜಿತಂ – ಭೂಷಣಾನಾಂ ಸ್ವನಿತೇ – ಆಭರಣಗಳ ಧ್ವನಿ ನಿಕ್ವಾಣಃ ನಿಕ್ವಣಃ ಕ್ವಾಣಃ ಕ್ವಣಃ ಕ್ವಣನಂ – ೫ ವೀಣಾ ಮುಂತಾದ ಸಕಲವಾದ್ಯ ಧ್ವನಿಯ ಹೆಸರು. ಪ್ರಾದೇಃ ಕ್ವಣಿತೇ (ಜಾತಾಃ) ಪ್ರಕ್ವಾಣಪ್ರಕ್ವಣಾದಯಃ ವೀಣಾಯಾಃ – ಪ್ರ ಎಂಬ ಉಪಸರ್ಗದಿಂದ ಕೂಡಿದ ಕ್ವಣ ಧಾತುವಿನಿಂದ ಉಂಟಾದ ಪ್ರಕ್ವಾಣ ಪ್ರಕ್ವಣ ಮುಂತಾದವುಗಳು ವೀಣಾಧ್ವನಿಯ ಹೆಸರಾಗುತ್ತವೆ. ಕೋಲಾಹಲಃ ಕಲಕಲಃ ಗುಂಪಿನಲ್ಲಿ ಹುಟ್ಟಿದ ದೊಡ್ಡ ಶಬ್ದ. ವಾಸಿತಂ ರುತಂ – ೨ ಮೃಗ

ನಿಷಾದರ್ಷಭಗಾಂಧಾರಷಡ್ಜ ಮಧ್ಯಮಧೈವತಾಃ ।
ಪಂಚಮಶ್ಚೇತ್ಯಮೀ ಸಪ್ತ ತಂತ್ರೀಕಂಠೋತ್ಥಿತಾಃ ಸ್ವರಾಃ ॥ ೧೮೪ ॥
(ಷಡ್ಜಂ ಮಯೂರೋ ವದತಿ ಕ್ರೌಂಚಃ ಕ್ವಣತಿ ಮಧ್ಯಮಮ್
ಪುಷ್ಪಸಾಧಾರಣೇ ಕಾಲೇ ಪಿಕಃ ಕೂಜತಿ ಪಂಚಮಮ್
ಧೈವತಂ ಹೇಷತೇ ವಾಜೀ ನಿಷಾದಂ ಬೃಂಹತೇ ಗಜಃ
ಮಯೂರಾದಯ ಏತೇ ಹಿ ಮತ್ತಾ ಗಾಯಂತಿ ಪಂಚಮಮ್)
ಕಾಕಲೀ ತು ಕಲೇ ಸೂಕ್ಷ್ಮೇ ಧ್ವನೌ ತು ಮಧುರಾಸ್ಫುಟೇ ।
ಕಲೋ ಮಂದ್ರಸ್ತು ಗಂಭೀರೇ ತಾರೋಽತ್ಯುಚ್ಚೈಸ್ತ್ರಯಸ್ತ್ರಿಷು ॥
ಸಮನ್ವಿತಲಯಸ್ತ್ವೇಕತಾಲೋ ವೀಣಾ ತು ವಲ್ಲಕೀ ।
ವಿಪಂಚೀ ಸಾ ತು ತಂತ್ರೀಭಿಃ ಸಪ್ತಭಿಃ ಪರಿವಾದಿನೀ ॥ ೧೮೬ ॥
ತತಂ ವೀಣಾದಿಕಂ ವಾದ್ಯಮಾನದ್ಧಂ ಮುರಜಾದಿಕಮ್ ।

---

ಪಕ್ಷ್ಯಾದಿ ಧ್ವನಿ. ಪ್ರತಿಶ್ರುತ್ (ಸ್ತ್ರೀ ತಾಂತ) ಪ್ರತಿಧ್ವಾನಃ – ೨ ಪ್ರತಿಧ್ವನಿಯ ಹೆಸರು. ಗೀತಂ ಗಾನಂ – ೨ ಹಾಡುಗಾರಿಕೆ. ಗಾನದ ಧ್ವನಿ ॥ ೧೮೩ ॥

ಶಬ್ದಾದಿವರ್ಗ ಮುಗಿದಿದೆ.

ನಿಷಾದಃ ಋಷಭಃ ಗಾಂಧಾರಃ ಷಡ್ಜಃ ಮಧ್ಯಮಃ ಧೈ (ಧೈ) ವತ ಪಂಚಮಃ – ೭ ತಂತಿಯಿಂದಲೂ ಕೊರಳಿನಿಂದಲೂ (ಕಂಠ) ಹುಟ್ಟಿದ ೭ ಸ್ವರಗಳ ಹೆಸರು. (ಇವುಗಳಲ್ಲಿ ನವಿಲು ಷಡ್ಜವನ್ನೂ ಹಸುಗಳು ವೃಷಭವನ್ನೂ ಆಡು ಕುರಿಗಳು ಗಾಂಧಾರವನ್ನೂ ಕ್ರೌಂಚ ಪಕ್ಷಿಯು ಮಧ್ಯಮವನ್ನೂ ವಸಂತದಲ್ಲಿ ಕೋಗಿಲೆಯು ಪಂಚಮವನ್ನೂ ಕುದುರೆಯು ಧೈವತವನ್ನೂ ಆನೆಯು ನಿಷಾದ ವನ್ನೂ ಹೇಳುತ್ತವೆ) ಕಾಕಲೀ — ಅವ್ಯಕ್ತಮಧುರವಾಗಿರುವ ಸೂಕ್ಷ್ಮಧ್ವನಿ. ಕಲಃ — ಕಿವಿಗೆ ಸುಖಕರವಾದ ಅವ್ಯಕ್ತ ಮಧುರಧ್ವನಿ. ಮಂದ್ರಃ — ಗಂಭೀರ ವಾದ ಧ್ವನಿ. ತಾರಃ — ಷಡ್ಜವನ್ನೂ ಮೀರಿದ ಅಧಿಕವಾದ ಧ್ವನಿ. ಈ ಮೂರು ಶಬ್ದಗಳೂ ತ್ರಿಲಿಂಗಗಳಾಗುತ್ತವೆ ಸಮನ್ವಿತಲಯಃ ಏಕತಾಲಃ — ೨ ನೃತ್ತಗೀತ ವಾದ್ಯಗಳೂ ಮೂರು ಸರಿಯಾಗಿ ಸೇರಿದ್ದಕ್ಕೆ ಹೆಸರು. ವೀಣಾ ವಲ್ಲಕೀ ವಿಪಂಚೀ — ೩ ವೀಣೆಯ ಹೆಸರು. ಪರಿವಾದಿನೀ — ೭ ತಂತಿಗಳಿಂದ ಕೂಡಿದ ವೀಣೆಯ ಹೆಸರು. ॥ ೧೮೬ ॥

ತತಂ – ವೀಣೆ ಮುಂತಾದ ತಂತಿಗಳುಳ್ಳ ವಾದ್ಯ. ಆನದ್ಧಂ – ತಬಲೆ ಮುಂತಾದ

ವಂಶಾದಿಕಂ ತು ಸುಷಿರಂ ಕಾಂಸ್ಯಂ ತಾಲಾದಿಕಂ ಘನವಮ್ ।। ೧೮೭ ।।
ಚತುರ್ವಿಧಮಿದಂ ವಾದ್ಯಂ ವಾದಿತ್ರಾತೋದ್ಯ ನಾಮಕವಮ್ ।
ಮೃದಂಗಾ ಮುರಜಾ ಭೇದಾಸ್ತ್ವಂಕ್ಯಾಲಿಂಗ್ಯೋರ್ಧ್ವಕಾಸ್ತ್ರಯಃ ।। ।। ೧೮೮ ।।
ಸ್ಯಾದ್ಯಶಃಪಟಹೋ ಢಕ್ಕಾ ಭೇರೀ ಸ್ತ್ರೀ ದುಂದುಭಿಃ ಪುಮಾನ್।
ಆನಕಃ ಪಟಹೋಽಸ್ತ್ರೀ ಸ್ಯಾತ್ಕೋಣೋ ವೀಣಾದಿವಾದನವಮ್ ।। ೧೮೯ ।।
ವೀಣಾದಂಡಃ ಪ್ರವಾಳ ಸ್ಯಾತ್ಕಕುಭಸ್ತು ಪ್ರಸೇವಕಃ ।
ಕೋಲಂಬಕಸ್ತು ಕಾಯೋಸ್ಯಾ ಉಪನಾಹೋ ನಿಬಂಧನವಮ್ ।। ೧೯೦ ।।
ವಾದ್ಯಪ್ರಭೇದಾ ಡಮರುಮಡ್ಡುಡಿಂಡಿಮಝುರ್ಝರಾಃ ।
ಮರ್ದಳಃ ಪಣವೋಽನ್ಯೇ ಚ ನರ್ತಕೀ ಲಾಸಕೀ ಸಮೇ ।। ೧೯೧ ।।
ವಿಲಂಬಿತಂ ದ್ರುತಂ ಮಧ್ಯಂ ತತ್ವಮೋಘೋ ಘನಂ ಕ್ರಮಾತ್ ।
ತಾಲ ಕಾಲಕ್ರಿಯಾಮಾನಂ ಲಯಸ್ಸಾಮ್ಯಮಥಾಸ್ತ್ರಿಯಾಮ್ ।। ।। ೧೯೨ ।।

---

ಚರ್ಮಸಹಿತ ವಾದ್ಯ. ಸುಷಿರಂ – ಕೊಳಲು ಮುಂತಾದ ಮುಖವಾದ್ಯ. ಘನಂ – ತಾಳ ಮುಂತಾದ ಕಂಚಿನ ವಾದ್ಯ. ವಾದ್ಯಂ ವಾದಿತ್ರಂ ಆತೋದ್ಯಂ — ಹಿಂದೆ ಹೇಳಿದ ತತಾದಿ ನಾಲ್ಕು ವಾದ್ಯಗಳ ಹೆಸರು. ಮೃದಂಗಃ ಮುರಜಃ — ಮದ್ದಳೆ. ಅಂಕ್ಯಃ ಆಲಿಂಗ್ಯಃ ಊರ್ಧ್ವಕಃ — ೩ ಇವು ಮದ್ದಳೆಯ ಭೇದಗಳು. ಯಶಃ ಪಟಹಃ ಢಕ್ಕಾ — ೨ ಢವಣೆಯ ಹೆಸರು. (ಡೋಲು) ಭೇರೀ (ಸ್ತ್ರೀ) ದುಂದುಭಿಃ (ಪು) — ನಗಾರಿಯ ಹೆಸರು. ಆನಕಃ ಪಟಹಃ (ಪುಂ — ನಪುಂ) — ೨ ತಮಟೆ. ಕೋಣಃ — ವೀಣೆ ಮುಂತಾದುವುಗಳನ್ನು ಬಾರಿಸುವ ಕೋಲು, ಬೆರಳ ತುದಿಗೆ ತಗಲಿಸಿಕೊಳ್ಳುವ ತಂತೀ ಸಾಧನ. ಪ್ರವಾಳಃ — ವೀಣೆಯ ದಂಡಿಗೆಯ ತೋಳು. ಕುಕುಭಃ ಪ್ರಸೇವಕಃ – ೨ ವೀಣೆಯ ಹೆರಳು. ಕೋಲಂಬಕಃ – ವೀಣೆಯ ತಂತೀ ಹೆರಳು ಮೊದಲಾದ ಶರೀರ. ಉಪನಾಹಃ ನಿಬಂಧನಂ – ೨ ವೀಣೆಯ ತಂತಿ ಕಟ್ಟುವ ಬಾಯಿ, ಬಿರಡೆ. ಡಮರುಃ ಮಡ್ಡುಃ ಡಿಂಡಿಮಃ ಝುರ್ಝರಃ ಮರ್ದಳಃ ಪಣವಃ – ೬ ಕ್ರಮವಾಗಿ ಬುಡುಬುಡುಕಿ, ಢಿಕ್ಕಿ, ಢಿಮುಕಿ, ಝೂಾಯಿ, ಮದ್ದಳೆ,ಗೋಮುಖ ವಾದ್ಯಗಳ ಹೆಸರು. ನರ್ತಕೀ ಲಾಸಕೀ – ಕುಣಿಯುವ ನಾಟ್ಯಗಾರ್ತಿಯ ಹೆಸರು. ।।೧೯೧।।

ತತ್ವಂ – ವಿಲಂಬಿತ ಗತಿ. ಓಘಃ – ತ್ವರಾಗತಿ. ಘನಂ – ಮಧ್ಯಗತಿ – ಕ್ರಮವಾಗಿ ನಾಟ್ಯಾದಿಗಳ ಆದ್ಯಂತಮಧ್ಯಕಾಲಗಳಿಗೆ ಹೆಸರು. ತಾಲಃ – ನಾಟ್ಯಾದಿಗಳ ಕಾಲ ಪರಿಮಿತಿ ಅಂದರೆ ಕಾಲಕ್ಕೆ ಸರಿಯಾಗಿ ಕೈ ಕಾಲಾಡಿಸುವುದು. ಲಯಃ – ನೃತ್ತಗೀತವಾದ್ಯಗಳ ಸರಿಯಾದ ಜಮಾವಣೆ: ತಾಂಡವಂ ನಟನಂ ನಾಟ್ಯಂ

ತಾಂಡವಂ ನಟನಂ ನಾಟ್ಯಂ ಲಾಸ್ಯಂ ನೃತ್ಯಂ ಚ ನರ್ತನಮ್ ।
ತೌರ್ಯತ್ರಿಕಂ ನೃತ್ತಗೀತವಾದ್ಯಂ ನಾಟ್ಯಮಿದಂ ತ್ರಯಮ್ ॥ ೧೯೩ ॥

ಭ್ರುಕುಂಸಶ್ಚ ಭ್ರುಕುಂಸಶ್ಚ ಭ್ರೂಕುಂಸಶ್ಚೇತಿ ನರ್ತಕಃ ।
ಸ್ತ್ರೀ ವೇಷಧಾರೀ ಪುರುಷೋ ನಾಟ್ಯೋಕ್ತೌ ಗಣಿಕಾಜ್ಜುಕಾ ॥ ೧೯೪ ॥

ಭಗಿನೀಪತಿರಾವುತ್ತೋ ಭಾವೋ ವಿದ್ವಾನಥಾವುಕಃ ।
ಜನಕೋ ಯುವರಾಜಸ್ತು ಕುಮಾರೋ ಭರ್ತೃದಾರಕಃ ॥ ೧೯೫ ॥

ರಾಜಾ ಭಟ್ಟಾರಕೋ ದೇವಸ್ತತ್ಸುತಾ ಭರ್ತೃದಾರಿಕಾ ।
ದೇವೀ ಕೃತಾಭಿಷೇಕಾಯಾಮಿತರಾಸು ತು ಭಟ್ಟಿನೀ ॥ ೧೯೬ ॥

ಅಬ್ರಹ್ಮಣ್ಯ ಮವಧ್ಯೋಕ್ತೌ ರಾಜ್ಞಸ್ಸ್ಯಾಲಸ್ತು ರಾಷ್ಟ್ರಿಯಃ ।
ಅಂಬಾ ಮಾತಾಥ ಬಾಲಾ ಸ್ಯಾದ್ವಾಸೂ ರಾರ್ಯಸ್ತು ಮಾರಿಷಃ ॥೧೯೭॥

ಅತ್ತಿಕಾ ಭಗಿನೀ ಜ್ಯೇಷ್ಠಾ ನಿಷ್ಠಾ ನಿರ್ವಹಣೇ ಸಮೇ ।
ಹಂಡೇ ಹಂಜೇ ಹಲಾಹ್ವಾನೇ ನೀಚಾಂ ಚೇಟೀಂ ಸಖೀಂಪ್ರತಿ ॥ ೧೯೮ ॥

ಅಂಗಹಾರೋಂಗವಿಕ್ಷೇಪೋ ವ್ಯಂಜಕಾಭಿನಯೌ ಸಮೌ ।
ನಿರ್ವೃತ್ತ್ಯೇತ್ವಂಗಸತ್ವಾಭ್ಯಾಂ ದ್ವೇ ತ್ರಿಷ್ವಾಂಗಿಕಸಾತ್ವಿಕೇ ॥ ೧೯೯ ॥

---

ಲಾಸ್ಯಂ ನೃತ್ಯಂ ನರ್ತನಂ – ೯ ಭರತನಾಟ್ಯಕ್ಕನುಸಾರವಾಗಿ ಕುಣಿಯುರವುದು. ತೌರ್ಯತ್ರಿಕಂ – ಕುಣಿಯುವುದು ಹಾಡುವುದು ಬಾರಿಸುವುದು ಈ ಮೂರು ಸೇರಿದ ನಾಟ್ಯ. ಭ್ರುಕುಂಸಃ ಭ್ರುಕುಂಸಃ ಭ್ರೂಕುಂಸಃ – ೩ ಸ್ತ್ರೀವೇಷಧಾರಿ ಯಾದ ನರ್ತಕ. ಈ ಶಬ್ದಗಳೂ ಮುಂದೆ ಹೇಳುವ ಶಬ್ದಗಳೂ ನಾಟ್ಯದಲ್ಲಿ ವ್ಯವಹರಿಸಲ್ಪಡುತ್ತದೆ. ಅಜ್ಜುಕಾ – ಸೂಳೆ- ಆವುತ್ತಃ – ಸಹೋದರಿಯ ಗಂಡ. ಭಾವಃ – ವಿದ್ವಾಂಸನು. ಆವುಕಃ – ತಂದೆ. ಕುಮಾರಃ ಭರ್ತೃಧಾರಕ – ೨ ಯುವರಾಜನ ಹೆಸರು. ಭಟ್ಟಾರಕಃ ದೇವಃ – ರಾಜನ ಹೆಸರು. ಭರ್ತೃದಾರಿಕಾ – ರಾಜನ ಮಗಳು: ದೇವೀ - ಪಟ್ಟಾಭಿಷಿಕ್ತಳಾದ ರಾಣಿ. ಭಟ್ಟಿನೀ – ಇತರ ರಾಜಪತ್ನಿಯರು. ॥೧೯೬॥

ಅಬ್ರಹ್ಮಣ್ಯಂ – ಕೊಲ್ಲಬಾರದೆಂಬ ಮಾತು. ರಾಷ್ಟ್ರಿಯಃ – ಅರಸನ ಭಾವಮೈದುನ ಅಂಬಾ – ತಾಯಿ. ವಾಸೂಃ – ಚಿಕ್ಕಹುಡುಗಿ. ಮಾರಿಷಃ ಪೂಜ್ಯನು. ಅತ್ತಿಕಾ – ಅಕ್ಕನ ಹೆಸರು. ನಿಷ್ಠಾ ನಿರ್ವಹಣಂ – ನಾಟಕ ಕಥೆಯನ್ನು ಮುಗಿಸುವುದು. ಹಂಡೇ ಹಂಜೇ ಹಲಾ – ಕ್ರಮವಾಗಿ ನೀಚಳನ್ನೂ ದಾಸಿಯನ್ನೂ ಸಖಿಯನ್ನೂ ಕರೆಯುವಿಕೆ. ಅಂಗಹಾರಃ ಅಂಗ ವಿಕ್ಷೇಪಃ – ೨ ಕುಣಿಯುವಾಗ ಮೈಕುಲುಕಿಸುವಿಕೆ. ವ್ಯಂಜಕಃ ಅಭಿನಯಃ – ೨ ಹಸ್ತವಿನ್ಯಾಸಾದಿಗಳಿಂದ ಭಾವಾರ್ಥವನ್ನು ತಿಳಿಸುವುದು. ಆಂಗಿಕಂ –

ಶೃಂಗಾರ ವೀರ ಕರುಣಾದ್ಭುತಹಾಸ್ಯ ಭಯಾನಕಾಃ
ಬೀಭತ್ಸರೌದ್ರೌ ಚ ರಸಾಃ ಶೃಂಗಾರಶ್ಶುಚಿರುಜ್ವಲಃ ॥ ೨೦೦ ॥

ಉತ್ಸಾಹವರ್ಧನೋ ವೀರಃ ಕಾರುಣ್ಯಂ ಕರುಣಾ ಘೃಣಾ ।
ಕೃಪಾ ದಯಾನುಕಂಪಾ ಸ್ಯಾದನುಕ್ರೋಶೋಽಪ್ಯಥೋ ಹಸಃ ॥ ೨೦೧ ॥

ಹಾಸೋ ಹಾಸ್ಯಂ ಚ ಬೀಭತ್ಸಂ ವಿಕೃತಂ ತ್ರಿಷ್ವಿದಂ ದ್ವಯವತ್ ।
ವಿಸ್ಮಯೋಽದ್ಭುತಮಾಶ್ಚರ್ಯಂ ಚಿತ್ರಮುಪ್ಯಥ ಭೈರವಮ್ ॥೨೦೨॥

ದಾರುಣಂ ಭೀಷಣಂ ಭೀಷ್ಮಂ ಘೋರಂ ಭೀಮಂ ಭಯಾನಕಮ್ ।
ಭಯಂಕರಂ ಪ್ರತಿಭಯಂ ರೌದ್ರಂ ತೂಗ್ರಮಮೀ ತ್ರಿಷು ॥೨೦೩॥

ಚತುರ್ದಶ ದರತ್ರಾಸೌ ಭೀತಿರ್ಭೀಃ ಸಾಧ್ವಸಂ ಭಯಮ್ ।
ವಿಕಾರೋ ಮಾನಸೋ ಭಾವೋಽನುಭಾವೋ ಭಾವಬೋಧಕಃ ॥೨೦೪॥

ಗರ್ವೋಽಭಿಮಾನೋಽಹಂಕಾರೋ ಮಾನಶ್ಚಿತ್ತಸಮುನ್ನತಿಃ ।

---

ಕಡೆಗಣ್ಣು ಮುಂತಾದ ಅಂಗಗಳಿಂದ ತೋರಿಸಿದ ಅಭಿನಯ. ಸಾತ್ವಿಕಂ – ಅಂತಃಕರಣದಿಂದ ಹುಟ್ಟಿದ ಬೆವರು ರೋಮಾಂಚಾದಿ ಅಭಿನಯ. ಶೃಂಗಾರಃ ವೀರಃ ಕರುಣಃ ಅದ್ಭುತಃ ಹಾಸ್ಯಃ ಭಯಾನಕಃ ಬೀಭತ್ಸಃ ರೌದ್ರಃ – ಇವು ೮ ರಸಗಳು. ಶಾಂತರಸ ಸೇರಿ ೯ ಆಗುತ್ತವೆ. ಶೃಂಗಾರಃ ಶುಚಿಃ ಉಜ್ವಲಃ – ೩ ಶೃಂಗಾರರಸದ ಹೆಸರು. ಉತ್ಸಾಹವರ್ಧನಃ ವೀರಃ – ೨ ವೀರರಸ. ಕಾರುಣ್ಯಂ ಕರುಣಾ ಘೃಣಾ ಕೃಪಾ ದಯಾ ಅನುಕಂಪಾ ಅನುಕ್ರೋಶಃ – ೭ ಕರುಣರಸ ॥ ೨೦೧ ॥

ಹಸಃ ಹಾಸಃ ಹಾಸ್ಯಂ – ೩ ಹಾಸ್ಯರಸದ ಹೆಸರು. ಬೀಭತ್ಸಂ ವಿಕೃತಂ – ೨ ಬೀಭತ್ಸರಸ. ಇವೆರಡು ಪದಗಳು ತಲೆಬುರುಡೆ ಕರುಳು ಮುಂತಾದವುಗಳನ್ನು ಹೇಳುವಾಗ ತ್ರಿಲಿಂಗಗಳಾಗುತ್ತವೆ. ವಿಸ್ಮಯಃ ಅದ್ಭುತಂ ಆಶ್ಚರ್ಯಂ ಚಿತ್ರಂ – ೪ ಅದ್ಭುತರಸ. ಭೈರವಂ ದಾರುಣಂ ಭೀಷಣಂ ಭೀಷ್ಮಂ ಘೋರಂ ಭೀಮಂ ಭಯಾನಕಂ ಭಯಂಕರಂ ಪ್ರತಿಭಯಂ – ೯ ಭಯಾನಕ ರಸ. ರೌದ್ರಂ ಉಗ್ರಂ – ೨ ರೌದ್ರರಸ. ಅದ್ಭುತ ಮೊದಲಾದ ೧೪ ಶಬ್ದಗಳೂ ರಸಕ್ಕೆ ಕಾರಣವಾದ ವಸ್ತುವನ್ನು ಹೇಳುವಾಗ ತ್ರಿಲಿಂಗಗಳಾಗುತ್ತವೆ. ದರಃ ತ್ರಾಸಃ ಭೀತಿಃ ಸಾಧ್ವಸಂ ಭಯಂ – ೬ ಭಯ, ಅಂಜಿಕೆ. ಭಾವಃ – ಮನೋವಿಕಾರ. ರತ್ಯಾದಿ ಸ್ಥಾಯಿಭಾವ ವ್ಯಭಿಚಾರಿ ಭಾವಗಳು. ಅನುಭಾವಃ – ಭಾವವನ್ನು ತಿಳಿಸುವ ಮುಖವಿಕಾಸಾದಿಗಳು. ಗರ್ವಃ ಅಭಿಮಾನಃ ಅಹಂಕಾರಃ – ೩ ಅಹಂಕಾರ. ಮಾನಃ ಚಿತ್ತಸಮುನ್ನತಿಃ – ತಾನೇ ದೊಡ್ಡವನೆಂಬ ಅಹಂಕಾರ

ಅನಾದರಃ ಪರಿಭವಃ ಪರೀಭಾವಸ್ತಿರಸ್ಕ್ರಿಯಾ ॥೨೦೫॥

ರೀಢಾವಮಾನನಾವಜ್ಞಾವಹೇಳನಮಸೂರ್ಕ್ಷಣಮ್ ।

ಮಂದಾಕ್ಷಂ ಹ್ರೀಸ್ತ್ರಪಾವ್ರೀಡಾ ಲಜ್ಜಾ ಸಾಪತ್ರಪಾನ್ಯತಃ ॥೨೦೬॥

ಕ್ಷಾಂತಿಸ್ತಿತಿಕ್ಷಾಭಿಧ್ಯಾತು ಪರಸ್ಯ ವಿಷಯೇ ಸ್ಪೃಹಾ ।

ಅಕ್ಷಾಂತಿರೀರ್ಷ್ಯಾಸೂಯಾ ತು ದೋಷಾರೋಪೋ ಗುಣೇಷ್ವಪಿ ॥ ೨೦೭ ॥

ವೈರಂ ವಿರೋಧೋ ವಿದ್ವೇಷೋ ಮನ್ಯುಶೋಕೌತು ಶುಕ್ ಸ್ತ್ರಿಯಾಂ

ಪಶ್ಚಾತ್ತಾಪೋಽನುತಾಪಶ್ಚ ವಿಪ್ರತೀಸಾರ ಇತ್ಯಪಿ ॥ ೨೦೮ ॥

ಕೋಪಕ್ರೋಧಾಮರ್ಷರೋಷಪ್ರತಿಘಾ ರುಟ್‌ಕ್ರುಧೌ ಸ್ತ್ರಿಯೌ ।

ಶುಚೌ ತು ಚರಿತೇ ಶೀಲಮುನ್ಮಾದಶ್ಚಿತ್ತವಿಭ್ರಮಃ ॥ ೨೦೯ ॥

ಪ್ರೇಮಾ ನಾ ಪ್ರಿಯತಾ ಹಾರ್ದಂ ಪ್ರೇಮಸ್ನೇಹೋ ಥ ದೋಹದಂ ।

ಇಚ್ಛಾ ಕಾಂಕ್ಷಾ ಸ್ಪೃಹೇಹಾ ತೃಡ್ವಾಂಛಾ ಲಿಪ್ಸಾ ಮನೋರಥಃ ॥ ೨೧೦ ॥

ಕಾಮೋಽಭಿಲಾಷಸ್ತರ್ಷಶ್ಚ ಸ ಮಹಾನ್ ಲಾಲಸಾ ದ್ವಯೋಃ ।

---

ಅನಾದರಃ ಪರಿಭವಃ ಪರೀಭಾವಃ ತಿರಸ್ಕ್ರಿಯಾ ರೀಢಾ ಅವಮಾನನಾ ಅವಜ್ಞಾ ಅವಹೇಳನಂ ಅಸೂರ್ಕ್ಷಣಂ — ೯ ತಿರಸ್ಕಾರ. ಮಂದಾಕ್ಷಂ ಹ್ರೀಃ ತ್ರಪಾ ವ್ರೀಡಾ ಲಜ್ಜಾ (ಸ್ತ್ರೀ) – ೫ ನಾಚಿಕೆಯ ಹೆಸರು. ಅಪತ್ರಾಪಾ – ತಂದೆ ಮುಂತಾದವರಿಂದ ಉಂಟಾದ ಲಜ್ಜೆ. ॥ ೨೦೬ ॥

ಕ್ಷಾಂತಿಃ ತಿತಿಕ್ಷಾ – ೨ ಸಹನೆ, ಸೈರಣೆಯ ಹೆಸರು. ಅಭಿಧ್ಯಾ — ೧ ಪರರ ವಸ್ತುಗಳನ್ನು ಹೊಂದಬೇಕೆಂಬ ದುರಾಶೆ. ಅಕ್ಷಾಂತಿಃ ಈರ್ಷ್ಯಾ – ೨ ಹೊಟ್ಟೆಕಿಚ್ಚು. ಅಸೂಯಾ – ೧ ಗುಣಗಳಿದ್ದರೂ ಮರೆಮಾಚಿ ದೋಷಗಳ ನ್ನೆಣಿಸುವ ಬುದ್ಧಿ. ವೈರಂ ವಿರೋಧಃ ವಿದ್ವೇಷಃ – ೩ ವೈರ, ಶತ್ರುತ್ವ. ಮನ್ಯುಃ ಶೋಕಃ ಶುಕ್ (ಚಾಂತ ಸ್ತ್ರೀ) – ಸಿಟ್ಟಿನಿಂದ ಉಂಟಾದ ಅಳು, ವ್ಯಸನ, ಚಿಂತೆ. ಪಶ್ಚಾತ್ತಾಪಃ ಅನುತಾಪಃ ವಿಪ್ರತೀಸಾರಃ — ೩ ಪಶ್ಚಾತ್ತಾಪ, ಕೆಲಸ ಕೆಟ್ಟು ಹೋದಾಗ ತನ್ನ ಅವಿವೇಕಾದಿಗಳನ್ನು ಕುರಿತು ಹೊಂದುವ ವ್ಯಸನ. ಕೋಪಃ ಕ್ರೋಧಃ ಅಮರ್ಷಃ ರೋಷಃ ಪ್ರತಿಘಃ ರುಟ್ (ಷಾಂತ ಸ್ತ್ರೀ) ಕ್ರುತ್ (ಧಾಂತ ಸ್ತ್ರೀ) — ೭ ಸಿಟ್ಟು, ಕೋಪ. ಶೀಲಂ — ೧ ಒಳ್ಳೇ ನಡತೆ, ಸದಾಚಾರ. ಉನ್ಮಾದಃ ಚಿತ್ತವಿಭ್ರಮಃ — ೨ ಚಿತ್ತಚಾಂಚಲ್ಯ, ಮೇರೆದಪ್ಪಿದ ಬುದ್ಧಿ, ಹುಚ್ಚುತನ. ಪ್ರೇಮಾ (ನಾಂತ ಪು) ಪ್ರಿಯತಾ ಹಾರ್ದಂ ಪ್ರೇಮ (ನಾಂತ ನಪುಂ) ಸ್ನೇಹಃ — ೫ ಸ್ನೇಹದ ಹೆಸರು, ವಿಶ್ವಾಸವರ್ತನೆ. ದೋಹದಂ ಇಚ್ಛಾ ಕಾಂಕ್ಷಾ ಸ್ಪೃಹಾ ಈಹಾ ತೃಟ್ (ಷಾಂತ ಸ್ತ್ರೀ) ವಾಂಛಾ ಲಿಪ್ಸಾ ಮನೋರಥಃ ಕಾಮಃ ಅಭಿಲಾಷಃ ತರ್ಷಃ — ೧೨ ಕೋರಿಕೆ, ಹಾರೈಕೆ.

ಉಪಾಧಿರ್ನಾ ಧರ್ಮಚಿಂತಾ ಪುಂಸ್ಯಾಧಿರ್ಮಾನಸೀ ವ್ಯಥಾ || ೨೧೧ ||

ಸ್ಯಾಚ್ಚಿಂತಾ ಸ್ಮೃತಿರಾಧ್ಯಾನಮುತ್ಕಂಠೋತ್ಕಲಿಕೇ ಸಮೇ |
ಉತ್ಸಾಹೋ ವ್ಯವಸಾಯಸ್ಯಾತ್ಸವೀರ್ಯಮತಿಶಕ್ತಿ ಭಾಕ್ || ೨೧೨ ||

ಕಪಟೋಽಸ್ತ್ರೀ ವ್ಯಾಜದಂಭೋಪಧಯಶ್ಛದ್ಮಕೈತವೇ |
ಕುಸೃತಿರ್ನಿಕೃತಿಃ ಶಾಠ್ಯಂ ಪ್ರಮಾದೋಽನವಧಾನತಾ || ೨೧೩ ||

ಕೌತೂಹಲಂ ಕೌತುಕಂ ಚ ಕುತುಕಂ ಚ ಕುತೂಹಲಮ್ |
ಸ್ತ್ರೀಣಾಂ ವಿಲಾಸಬಿಬ್ಬೋಕವಿಭ್ರಮಾ ಲಲಿತಂ ತಥಾ || ೨೧೪ ||

ಹೇಲಾ ಲೀಲೇತ್ಯಮೀ ಹಾವಾಃ ಕ್ರಿಯಾಃ ಶೃಂಗಾರಭಾವಜಾಃ |
ದ್ರವಕೇಳೀಪರೀಹಾಸಾಃ ಕ್ರೀಡಾಲೀಲಾ ಚ ನರ್ಮ ಚ || ೨೧೫ ||

ವ್ಯಾಜೋಽಪದೇಶೋ ಲಕ್ಷ್ಯಂಚ ಕ್ರೀಡಾ ಖೇಲಾ ಚ ಕೂರ್ದನಮ್ |
ಘರ್ಮೋ ನಿದಾಘಸ್ಸ್ವೇದಸ್ಸ್ಯಾತ್ಪ್ರಳಯೋನಷ್ಟಚೇಷ್ಟತಾ ||೨೧೬ ||

---

ಅಪೇಕ್ಷೆ. ಲಾಲಸಾ – ೧ ಹೆಚ್ಚಾದ ಅಪೇಕ್ಷೆ. ಉಪಾಧಿಃ (ಪು) ಧರ್ಮಚಿಂತಾ – ೨ ಧರ್ಮದ ಚಿಂತೆ,ಪುಣ್ಯಕಾರ್ಯ ಮಾಡಬೇಕೆಂಬ ಯೋಚನೆ. ಆಧಿಃ (ಪು) ಮಾನಸೀವ್ಯಥಾ ೨ ಮನಸ್ಸಿನ ವ್ಯಥೆ, ಅಂತರ್ದುಃಖ, ಮನೋರೋಗ.

ಚಿಂತಾ ಸ್ಮೃತಿಃ ಆಧ್ಯಾನಂ – ೩ ಚಿಂತಿಸುವುದು, ನೆನೆಸುವುದು. ಉತ್ಕಂಠಾ ಉತ್ಕಲಿಕಾ – ೨ ಇಷ್ಟವಸ್ತುಪ್ರಾಪ್ತಿಯಲ್ಲಿ ವಿಳಂಬವನ್ನು ಸೈರಿಸಲಾರದ ಕಳವಳ, ಉತ್ಸಾಹದಕಳವಳ, ತವಕ. ಉತ್ಸಾಹಃ ವ್ಯವಸಾಯಃ – ೨ ಮಹಾಕಾರ್ಯ ವಿಷಯಕವಾದ ಪ್ರಯತ್ನ. ವೀರ್ಯಂ – ೧ ಬಹಳಶಕ್ತಿಯುಳ್ಳ ಉತ್ಸಾಹ. ಕಪಟಃ [ಪುಂ ನಪುಂ] ವ್ಯಾಜಃ ದಂಭಃ ಉಪಧಿಃ (ಪು) ಛದ್ಮ [ನಾಂತ ನ] ಕೈತವಂ ಕುಸೃತಿಃ ನಿಕೃತಿಃ ಶಾಠ್ಯಂ – ೯ ಕಪಟದ ಹೆಸರು, ಮೋಸ, ಮರೆಮಾಚುವುದು. ಪ್ರಮಾದಃ ಅನವಧಾನತಾ – ೨ ಎಚ್ಚರತಪ್ಪುವುದು. ಕೌತೂಹಲಂ ಕೌತುಕಂ ಕುತುಕಂ ಕುತೂಹಲಂ – ೪ ಅಪೂರ್ವ ವಸ್ತುವನ್ನಪೇಕ್ಷಿಸುವುದು. ವಿಲಾಸಃ ಬಿಬ್ಬೋಕಃ ವಿಭ್ರಮಃ ಲಲಿತಂ ಹೇಲಾ ಲೀಲಾ – ೬ ಸ್ತ್ರೀಯರ ಮನೋವ್ಯಾಪಾರ ವಿಶೇಷಗಳು, ಶೃಂಗಾರದಿಂದ ಹುಟ್ಟಿದ ಚೇಷ್ಟೆಗಳು. ದ್ರವಃ ಕೇಳಿಃ ಪರೀಹಾಸಃ ಕ್ರೀಡಾ ಲೀಲಾ ನರ್ಮ [ನಾಂತ ನ] – ಸ್ತ್ರೀಪುರುಷರು ಸೇರಿ ಮಾಡುವ ಪರಿಹಾಸ. ವ್ಯಾಜಃ ಅಪದೇಶಃ ಲಕ್ಷ್ಯಂ – ೩ ನೆಪ, ಕಪಟದಅಂಗ, ಒಂದನ್ನು ಮರೆಮಾಚಿ ಮತ್ತೊಂದನ್ನು ತೋರಿಸುವುದು. ಕ್ರೀಡಾ ಖೇಲಾ ಕೂರ್ದನಂ – ೩ ಚೆಂಡು ಮುಂತಾದ ಆಟ. ಘರ್ಮಃ ನಿದಾಘಃ ಸ್ವೇದಃ – ೩ ಬೆವರು. ಪ್ರಳಯಃ – ಸುಖ ದುಃಖಾದಿಗಳಿಂದ ಮೈಮರೆಯುವಿಕೆ, ಏನೂ ತೋಚದಿರುವುದು. ||೨೧೬||

ಅವಹಿತ್ಥಾಕಾರಗುಪ್ತಿಸ್ಸವೌ ಸಂವೇಗ ಸಂಭ್ರವೌ।
ಸ್ಯಾದಾಚ್ಛುರಿತಕಂ ಹಾಸಸ್ಸೋಽಶ್ರಾಸಸ್ಸ ಮನಾಕ್ ಸ್ಮಿತಂ ॥ ೨೧೬ ॥
ಮಧ್ಯಮಸ್ಸ್ಯಾದ್ವಿಹಸಿತಂ ರೋಮಾಂಚೋ ರೋಮಹರ್ಷಣಂ।
ಕ್ರಂದಿತಂ ರುದಿತಂ ಕ್ರುಷ್ಟಂ ಜೃಂಭಸ್ತು ತ್ರಿಷು ಜೃಂಭಣಮ್ ।
ವಿಪ್ರಲಂಭೋ ವಿಸಂವಾದೋ ರಿಂಗಣಂ ಸ್ಖಲನಂ ಸಮೇ ॥ ೨೧೭ ॥

ಸ್ಯಾನ್ನಿದ್ರಾ ಶಯನಂ ಸ್ವಾಪಃ ಸ್ವಪ್ನಃ ಸಂವೇಶ ಇತ್ಯಪಿ ।
ತಂದ್ರೀ ಪ್ರಮೀಲಾಭ್ರು ಕುಟಿ ಭ್ರುರ್ಕುಟಿಭ್ರೂರ್ಕುಟಿಃ ಸ್ತ್ರಿಯಾಂ ॥೨೧೮॥

ಅದೃಷ್ಟಿಸ್ಸ್ಯಾದಸೌಮ್ಯೇಽಕ್ಷ್ಣಿ ಸಂಸಿದ್ಧಿ ಪ್ರಕೃತೀ ಸಮೇ ।
ಸ್ವರೂಪಂ ಚ ಸ್ವಭಾವಶ್ಚ ನಿಸರ್ಗಶ್ಚಾಥ ವೇಪಥುಃ ॥ ೨೨೦ ॥
ಕಂಪೋಽಥ ಕ್ಷಣ ಉದ್ಧರ್ಷೋ ಮಹ ಉದ್ಧವ ಉತ್ಸವಃ ।

ಇತಿ ನಾಟ್ಯವರ್ಗಃ

---

ಅವಹಿತ್ಥಾ – ೧ ಆಕಾರಗುಪ್ತಿಃ – ಅನುರಾಗ ಪ್ರೀತ್ಯಾದಿಗಳಿಂದ ಹುಟ್ಟಿದ ರೋಮಾಂಚಾದಿಗಳನ್ನು ಮರೆಮಾಚುವುದು. ಸಂವೇಗಃ ಸಂಭ್ರಮಃ – ಭಯ ತ್ವರಾದಿಗಳಿಂದ ಹುಟ್ಟಿದ ತಾರತಮ್ಯ ವಿಚಾರ, ಜಾಗರೂಕ ಮನೋವೃತ್ತಿ. ಆಚ್ಛುರಿತಕಂ – ಹಂಗಿಸಿ ನಗುವುದು, ಗೇಲಿ ಮಾಡುವುದು. ಸ್ಮಿತಂ – ಕಿರುನಗೆ, ಗಂಭೀರ ಹಾಸ್ಯ. ವಿಹಸಿತಂ – ಮಧ್ಯಸ್ಥವಾದ ಸಾಧಾರಣ ನಗು ರೋಮಾಂಚಃ ರೋಮಹರ್ಷಣಂ – ನವಿರು. ಕೂದಲು ಪುಳಕಿತವಾಗುವುದು. ಕ್ರಂದಿತಂ ರುದಿತಂ ಕ್ರುಷ್ಟಂ – ೩ ರೋದನ, ಗೋಳೋ ಎಂದು ಅಳುವುದು. ಜೃಂಭಃ ಜೃಂಭಣಂ – ೨ ಆಕಳಿಕೆ. ವಿಪ್ರಲಂಭಃ ವಿಸಂವಾದಃ – ೨ ವಿಪರೀತವಾಗಿ ನುಡಿಯುವುದು, ಕ್ರಮತಪ್ಪಿ ಹೇಳುವುದು. ರಿಂಖ(ಗ)ಣಂ ಸ್ಖಲನಂ – ೨ ಜಾರುವುದು, ನ್ಯಾಯ ನಿರ್ಬಂಧದಿಂದ ತಪ್ಪುವುದು. ನಿದ್ರಾ ಶಯನಂ ಸ್ವಾಪಃ ಸ್ವಪ್ನಃ ಸಂವೇಶಃ – ೫ ನಿದ್ದೆ. ತಂದ್ರೀ ಪ್ರಮೀಳಾ – ೨ ತೂಕಡಿಕೆ, ಗಾಢ ನಿದ್ರೆ. ಭ್ರುಕುಟಿಃ ಭ್ರುಕುಟಿಃ ಭ್ರೂಕುಟಿಃ – ೩ ಹುಬ್ಬು ಗಂಟಿಕ್ಕುವುದು. ಅದೃಷ್ಟಿಃ – ೧ ಬಿರುನೋಟ. ಅಸಮಾಧಾನ ತೋರಿಸುವ ಕುಟಿಲ ದೃಷ್ಟಿ. ಸಂಸಿದ್ಧಿಃ ಪ್ರಕೃತಿಃ ಸ್ವರೂಪಂ ಸ್ವಭಾವಃ ನಿಸರ್ಗಃ – ೫ ಸ್ವಭಾವ, ಸಹಜ ಮನೋಭಾವ. ವೇಪಥುಃ ಕಂಪಃ – ೨ ನಡುಗುವಿಕೆ. ಕ್ಷಣಃ ಉದ್ಧರ್ಷಃ ಮಹಃ ಉದ್ಧವಃ ಉತ್ಸವಃ – ೫ ಉತ್ಸವದ ಹೆಸರು. ॥೨೧॥

ನಾಟ್ಯವರ್ಗ ಮುಗಿದಿದೆ

## ಪಾತಾಳವರ್ಗಃ ೯

ಅಧೋ ಭುವನ ಪಾತಾಳಂ ಬಲಿಸದ್ಮ ರಸಾತಲಮ್ ॥ ೨೨೧ ॥
ನಾಗಲೋಕೋಽಥ ಕುಹರಂ ಸುಷಿರಂ ವಿವರಂ ಬಿಲಮ್ ।
ಛಿದ್ರಂ ನಿರ್ವ್ಯಥನಂ ರೋಕಂ ರಂಧ್ರಂ ಶ್ವಭ್ರಂ ವಪಾ ಸುಷಿಃ ॥ ೨೨೨ ॥
ಗರ್ತಾವಟೌ ಭುವಿ ಶ್ವಭ್ರೇ ಸರಂಧ್ರೇ ಸುಷಿರಂ ತ್ರಿಷು ।
ಅಂಧಕಾರೋಽಸ್ತ್ರಿಯಾಂ ಧ್ವಾಂತಂ ತಮಿಸ್ರಂ ತಿಮಿರಂ ತಮಃ ॥ ೨೨೩ ॥
ಧ್ವಾಂತೇ ಗಾಢೇಂಧತಮಸಂ ಕ್ಷೀಣೇಽವತಮಸಂ ತಮಃ ।
ವಿಷ್ವಕ್ಸಂತಮಸಂ—

ಇತಿ ಪಾತಾಳ ವರ್ಗಃ

## ಭೋಗಿವರ್ಗಃ ೧೦

ನಾಗಾಃ ಕಾದ್ರವೇಯಾಸ್ತದೀಶ್ವರಃ ॥ ೨೨೪ ॥
ಶೇಷೋಽನಂತೋ ವಾಸುಕಿಸ್ತು ಸರ್ಪರಾಜೋಽಥ ಗೋನಸೇ ।
ತಿ(ತ್ರಿ)ಲಿಷ್ಪಸ್ಸ್ಯಾದಜಗರೇ ಶಯುರ್ವಾಹಸ ಇತ್ಯುಭೌ ॥ ೨೨೫ ॥

---

ಅಧೋಭುವನಂ ಪಾತಾಳಂ ಬಲಿಸದ್ಮ (ನಾಂತ ನಪುಂ) ರಸಾತಲಂ ನಾಗ ಲೋಕಃ — ೫ ಪಾತಾಳ ಲೋಕದ ಹೆಸರು. ಕುಹರಂ ಸುಷಿರಂ ವಿವರಂ ಬಿಲಂ ಛಿದ್ರಂ ನಿರ್ವ್ಯಥನಂ ರೋಕಂ ರಂಧ್ರಂ ಶ್ವಭ್ರಂ ವಪಾ ಸುಷಿಃ (ಸ್ತ್ರೀ) — ೧೧ ಬಿಲ, ತೂತು. ಗರ್ತಃ ಅವಟಃ — ೨ ನೆಲಮಾಳಿಗೆ, ಹಗೆವು. ಸುಷಿರಂ — ರಂಧ್ರದಿಂದ ಕೂಡಿರುವುದು ಎಂಬರ್ಥದಲ್ಲಿ ಮೂರು ಲಿಂಗ ವಾಗುತ್ತದೆ. ಅಂಧಕಾರಃ (ಪು ನ) ಧ್ವಾಂತಂ ತಮಿಸ್ರಂ ತಿಮಿರಂ ತಮಃ (ಸಾಂತ ನ) — ೫ ಕತ್ತಲೆ. ಅಂಧತಮಸಂ — ಗಾಢೇ ಧ್ವಾಂತೇ — ಕಾರ್ಗತ್ತಲೆ, ಗಾಢಾಂಧಕಾರ. ಅವತಮಸಂ— ಕಿರುಗತ್ತಲೆ ಕ್ಷೀಣವಾದ ತಮಸ್ಸು. ಸಂತ - ಮಸಂ — ಎಲ್ಲಾ ಕಡೆ ವ್ಯಾಪಿಸಿರುವ ಕತ್ತಲೆ, ಹೆಗ್ಗತ್ತಲೆ. ॥ ೨೨೫ ॥

ಪಾತಾಳವರ್ಗ ಮುಗಿದಿದೆ

ನಾಗಾಃ ಕಾದ್ರವೇಯಾಃ — ೨ ನಾಗಾಲೋಕದಲ್ಲಿರುವ ಮನುಷ್ಯಾಕಾರದ ಹಾವುಗಳು. ಶೇಷಃ ಅನಂತಃ — ೨ ನಾಗಗಳಿಗೆ ಅರಸನಾದ ಆದಿಶೇಷನು. ವಾಸುಕಿಃ ಸರ್ಪರಾಜಃ — ೨ ವಾಸುಕಿಯೆಂಬ ದೊಡ್ಡ ಸರ್ಪ, ಸರ್ಪಗಳ ರಾಜ. ಗೋನಸಃ ತಿಲಿಷ್ಪಃ — ೨ ಬೆಟ್ಟಗಳಲ್ಲಿ ಶಿಲೆಯಂತೆ ಬಿದ್ದಿರುವ ದೊಡ್ಡ ಹೆಬ್ಬಾವು.

ಅಲಗರ್ದೋ ಜಲವ್ಯಾಳಸ್ಸಮೌ ರಾಜಿಲಡುಂಡುಭೌ ।
ಮಾಲುಧಾನೋ ಮಾತುಲಾಹಿರ್ನಿರ್ಮುಕ್ತೋ ಮುಕ್ತಕಂಚುಕಃ ॥ ೨೨೬ ॥

ಸರ್ಪಃ ಪೃದಾಕುರ್ಭುಜಗೋ ಭುಜಂಗೋಽಹಿರ್ಭುಜಂಗಮಃ ।
ಆಶೀವಿಷೋ ವಿಷಧರಶ್ಚಕ್ರೀ ವ್ಯಾಲಸ್ಸರೀಸೃಪಃ ॥ ೨೨೭ ॥

ಕುಂಡಲೀ ಗೂಢಪಾಚ್ಚಕ್ಷುಶ್ಶ್ರವಾಃ ಕಾಕೋದರಃ ಫಣೀ ।
ದರ್ವೀಕರೋ ದೀರ್ಘಪೃಷ್ಠೋ ದಂದಶೂಕೋ ಬಿಲೇಶಯಃ ॥ ೨೨೮ ॥

ಉರಗಃ ಪನ್ನಗೋ ಭೋಗೀ ಜಿಹ್ಮಗಃ ಪವನಾಶನಃ ।
(ಲೇಲಿಹಾನೋ ದ್ವಿರಸನೋ ವ್ಯಾಲಃ ಕುಂಭೀನಸೋ ಹರಿಃ)
ತ್ರಿಷ್ವಾಹೇಯಂ ವಿಷಾಸ್ಥ್ಯಾದಿ ಸ್ಫಟಾಯಾಂ ತು ಫಣಾ ದ್ವಯೋಃ ॥ ೨೨೯ ॥

ಸಮೌ ಕಂಚುಕನಿರ್ಮೋಕೌ ಕ್ಷ್ವೇಲಸ್ತು ಗರಲಂ ವಿಷಮ್ ।
ಪುಂಸಿ ಕ್ಲೀಬೇ ಚ ಕಾಕೋಲ ಕಾಲಕೂಟ ಹಲಾಹಲಾಃ ॥ ೨೩೦ ॥

ಸೌರಾಷ್ಟ್ರಿಕಃ ಶೌಕ್ಲಿಕೇಯೋ ಬ್ರಹ್ಮಪುತ್ರಃ ಪ್ರದೀಪನಃ ।
ದಾರದೋ ವತ್ಸನಾಭಶ್ಚ ವಿಷಭೇಧಾ ಅಮೀನವ ॥ ೨೩೧ ॥

---

ಶಯುಃ ವಾಹಸಃ — ೨ ಹೆಬ್ಬಾವು, ದಾಸರಿ ಹಾವು. ಅಲಗರ್ದಃ ಜಲವ್ಯಾಳಃ — ೨ ನೀರು ಹಾವು. ರಾಜಿಲಃ ಡುಂಡುಭಃ — ೨ ಎರಡು ತಲೆಯುಳ್ಳ ಸರ್ಪ ವಿಶೇಷ. ಮಾಲುಧಾನಃ ಮಾತುಲಾಹಿಃ — ೨ ಊಸರವಳ್ಳಿ ಹಾವು, ವಿಷಗಿಡದ ಹುಳ. ನಿರ್ಮುಕ್ತಃ ಮುಕ್ತ ಕುಂಚುಕಃ — ೨ ಪೊರೆಬಿಟ್ಟ ಹಾವು. ಸರ್ಪಃ ಪೃದಾಕುಃ ಭುಜಗಃ ಭುಜಂಗಃ ಅಹಿಃ ಭುಜಂಗಮಃ ಆಶೀವಿಷಃ ವಿಷಧರಃ ಚಕ್ರೀ ವ್ಯಾಳಃ ಸರೀಸೃಪಃ ಕುಂಡಲೀ ಗೂಢಪಾತ್ ಚಕ್ಷುಶ್ರವಾಃ (ಸಾಂತ) ಕಾಕೋದರಃ ಫಣೀ (ನಾಂತ) ದರ್ವೀಕರಃ ದೀರ್ಘಪೃಷ್ಠಃ ದಂದಶೂಕಃ ಬಿಲೇಶಯಃ ಉರಗಃ ಪನ್ನಗಃ ಬೋಗೀ (ನಾಂತ) ಜಿಹ್ಮಗಃ ಪವನಾಶನಃ — ೨೫ ಸಾಮಾನ್ಯವಾಗಿ ಹಾವಿನ ಹೆಸರು. ಲೇಲಹಾನಃ ದ್ವಿರಸನಃ ವ್ಯಾಲಃ ಕುಂಬೀನಸಃ ಹರಿಃ — ಇವು ಸರ್ಪಕ್ಕೆ ಅಧಿಕ ನಾಮ. ॥೨೨೯॥

ಆಹೇಯಂ (ತ್ರಿಲಿಂಗ) — ಹಾವಿನ ಎಲುಬು ಹೆಡೆ ಚರ್ಮ ಮುಂತಾದವುಗಳು. ಸ್ಫಟಾ ಫಣಾ — ೨ ಹೆಡೆಯ ಹೆಸರು. ಕಂಚುಕಃ ನಿರ್ಮೋಕಃ —ಹಾವಿನ ಪರೆ. ಕ್ಷ್ವೇಳಃ ಗರಳಂ ವಿಷಂ (ಪುಂ ನಪುಂ — ೩ ಸಾಮಾನ್ಯ ವಿಷದ ಹೆಸರು. ಕಾಕೋಲಃ ಕಾಲಕೂಟಃ ಹಾಲಾಹಲಃ ಸೌರಾಷ್ಟ್ರಿಕಃ ಶಾಕ್ಲಿಕೇಯಃ ಬ್ರಹ್ಮಪುತ್ರಃ ಪ್ರದೀಪನಃ ಧಾರದಃ ವತ್ಸನಾಭು — ೯ ವಿಷದ ಬೇದಗಳು. ವಿಷವೈದ್ಯಃ ಜಾಂಗಲಿಕಃ – ೨ ವಿಷವನ್ನು ಇಳಿಸುವ ವೈದ್ಯನು.

ವಿಷವೈದ್ಯೋ ಜಾಂಗಲಿಕೋ ವ್ಯಾಲಗ್ರಾಹ್ಯಹಿತುಂಡಿಕಃ ||

ಇತಿ ಭೋಗಿವರ್ಗಃ

ನರಕವರ್ಗಃ ೧೧

ಸ್ಯಾನ್ನಾರಕಸ್ತು ನರಕೋ ನಿರಯೋ ದುರ್ಗತಿಃ ಸ್ತ್ರಿಯಾಮ್ || ೨೩೨ ||
ತದ್ಭೇದಾಸ್ತ ಪನಾ ವೀಚಿ ಮಹಾರೌರವರೌರವಾಃ |
ಸಂಘಾತಃ ಕಾಲಸೂತ್ರಂ ಚೇತ್ಯಾದ್ಯಾಸ್ಸತ್ವಾಸ್ತು ನಾರಕಾಃ || ೨೩೩ ||
ಪ್ರೇತಾ ವೈತರಣೀ ಸಿಂಧುಃ ಸ್ಯಾದಲಕ್ಷ್ಮೀಸ್ತು ನಿರ್ಋತಿಃ |
ವಿಷ್ಟಿರಾಜೂಃ ಕಾರಣಾ ತು ಯಾತನಾ ತೀವ್ರವೇದನಾ || ೨೩೪ ||
ಪೀಡಾ ಬಾಧಾ ವ್ಯಥಾ ದುಃಖಮಾಮನಸ್ಯಂ ಪ್ರಸೂತಿಜಮ್ |
ಸ್ಯಾತ್ಕಷ್ಟಂ ಕೃಛ್ರಮಾಭೀಲಂ ತ್ರಿಷ್ವೇಷಾಂ ಭೇದ್ಯಗಾಮಿ ಯತ್ ||

ಇತಿನರಕವರ್ಗಃ

---

ವ್ಯಾಲಾಗ್ರಾಹೀ(ನಾಂತ) ಅಹಿತುಂಡಿಕಃ – ೨ ಹಾವಾಡಿಗ. ಹಾವು ಹಿಡಿಯು ವವನು. ||೨೩೨||

ಭೋಗಿವರ್ಗ ಮುಗಿದಿದೆ

ನಾರಕಃ ನರಕಃ ನಿರಯಃ ದುರ್ಗತಿಃ (ಸ್ತ್ರೀ) — ೪ ಸಾಮಾನ್ಯ ನರಕದ ಹೆಸರು. ತಪನಃ ಅವೀಚಿಃ ಮಹಾರೌರವಃ ರೌರವಃ ಸಂಘಾತಃ ಕಾಲಸೂತ್ರಂ — ಇವು ಮುಂತಾದವುಗಳು ನರಕಭೇದಗಳು. ಆದಿಪದದಿಂದ ಅಸಿಪತ್ರಃ ಕುಂಭೀಪಾಕಃ ಇತ್ಯಾದಿ ತಿಳಿಯಬೇಕು. ನಾರಕಾಃ ಪ್ರೇತಾಃ — — ೨ ನರಕದಲ್ಲಿ ಯಾತನೆಪಡುವ ದುಃಖಜೀವಿಗಳು. ವೈತರಣೀ ಸಿಂಧುಃ — ೨ ನರಕದಲ್ಲಿ ಹರಿಯುವ ಕಷ್ಟದ ನದಿಗಳು. ಅಲಕ್ಷ್ಮೀಃ ನಿರ್ಋತಿಃ — ೨ ನಿರ್ಭಾಗ್ಯತನ, ಅಭಾಗ್ಯ. ವಿಷ್ಟಿಃ ಆಜೂಃ — ೨ ಕೆಲಸಕ್ಕಾಗಿ ಬಿಟ್ಟಿಹಿಡಿಯುವಿಕೆ, ನರಕಕ್ಕೆ ತಳ್ಳುವುದೆಂದು ಕೆಲವರು ಹೇಳುತ್ತಾರೆ. ಕಾರಣಾ ಯಾತನಾ ತೀವ್ರ ವೇದನಾ — ೩ ಅತಿಶಯವಾದ ವೇದನೆ, ಚಿತ್ರಹಿಂಸೆ. ಪೀಡಾ ಬಾಧಾ ವ್ಯಥಾ ದುಃಖಂ ಆಮನಸ್ಯಂ ಪ್ರಸೂತಿಜಂ ಕಷ್ಟಂ ಕೃಛ್ರಂ ಆಭೀಲಂ — ೯ ಸಾಮಾನ್ಯವಾಗಿ ದುಃಖದ ಹೆಸರು. ಇವುಗಳಲ್ಲಿ ಯಾವುದಾದರೂ ವಿಶೇಷ್ಯ ನಿಘ್ನವಾದರೆ ವಿಶೇಷ್ಯ ಲಿಂಗವನ್ನೇ ಹೊಂದುತ್ತದೆ. || ೨೩೫ ||

ನರಕವರ್ಗ ಮುಗಿದಿದೆ

## ಅಥ ವಾರಿವರ್ಗಃ ೧೨

ಸಮುದ್ರೋಽಬ್ಧಿರಕೂಪಾರಃ ಪಾರಾವಾರಸ್ಸರಿತ್ಪತಿಃ ।
ಉದನ್ವಾನುದಧಿಸ್ಸಿಂಧುಃ ಸರಸ್ವಾನ್ ಸಾಗರೋಽರ್ಣವಃ ॥ ೨೩೬ ॥

ರತ್ನಾಕರೋ ಜಲನಿಧಿರ್ಯಾದಃಪತಿರಪಾಂಪತಿಃ ।
ತಸ್ಯ ಪ್ರಭೇದಾಃ ಕ್ಷೀರೋದೋ ಲವಣೋದಸ್ತಥಾಪರೇ ॥ ೨೩೭ ॥

ಆಪಃ ಸ್ತ್ರೀ ಭೂಮ್ನಿ ವಾರ್ವಾರಿ ಸಲಿಲಂ ಕಮಲಂ ಜಲವ್ ।
ಪಯಃ ಕೀಲಾಲಮಮೃತಂ ಜೀವನಂ ಭುವನಂ ವನಮ್ ॥ ೨೩೮ ॥

ಕಬಂಧಮುದಕಂ ಪಾಥಃ ಪುಷ್ಕರಂ ಸರ್ವತೋಮುಖಮ್ ।
ಅಂಭೋಽರ್ಣಸ್ತೋಯಪಾನೀಯ ನೀರಕ್ಷೀರಾಂಬು ಶಂಬರಮ್ ॥ ೨೩೯ ॥

(ಕೃಪೀಟಂ ಕಾಂಡಮಸ್ತ್ರೀಸ್ಯಾಜ್ಜೀವನೀಯಂ ಕುಶಂ ವಿಷಮ್)
ಮೇಘಪುಷ್ಪಂ ಘನರಸಃ ತ್ರಿಷು ದ್ವೇ ಆಪ್ಯಮಮ್ಮಯಮ್ ।
ಭಂಗಸ್ತರಂಗ ಊರ್ಮಿರ್ವಾ ಸ್ತ್ರಿಯಾಂ ವೀಚಿರಥೋರ್ಮಿಷು ॥ ೨೪೦ ॥

ಮಹತ್ಸೂಲ್ಲೋಲಕಲ್ಲೋಲೌ ಸ್ಯಾದಾವರ್ತೋಽಂಭಸಾಂ ಭ್ರಮಃ ।

---

ಸಮುದ್ರಃ ಅಬ್ಧಿಃ ಅಕೂಪಾರಃ ಪಾರಾವಾರಃ ಸರಿತ್ಪತಿಃ ಉದನ್ವಾನ್ — (ತಾಂತ) ಉದಧಿಃ ಸಿಂಧುಃ ಸರಸ್ವಾನ್ (ತಾಂತ) ಸಾಗರಃ ಅರ್ಣವಃ ರತ್ನಾಕರಃ ಜಲನಿಧಿಃ ಯಾದಃಪತಿಃ ಅಪಾಂಪತಿಃ – ೧೫ ಸಮುದ್ರ ಕಡಲು. ಕ್ಷೀರೋದಃ ಲವಣೋದಃ ಇತ್ಯಾದಿ ಸಮುದ್ರದ ಭೇಧಗಳು. ಇಕ್ಷುರಸೋದಃ ಸುರೋದಃ ದಧಿಮಂಡೋದಃ ಸ್ವಾದೂದಃ ಘೃತೋದಃ – ಹೀಗೆ ೭ ಭೇದ. ಆಪಃ (ಅಪ್ ಶಬ್ದ ನಿತ್ಯ ಸ್ತ್ರೀಲಿಂಗ ಬಹುವಚನಾಂತ) ವಾಃ (ವಾರ್ ಶಬ್ದ ಸ್ತ್ರೀ) ವಾರಿ (ಇಕಾರಾಂತ ನಪುಂ) ಸಲಿಲಂ ಕಮಲಂ ಜಲಂ ಪಯಃ (ಸಾಂತ ನಪುಂ) ಕೀಲಾಲಂ ಅಮೃತಂ ಜೀವನಂ ಭುವನಂ ವನಮ್ ಕಬಂಧಂ ಉದಕಂ ಪಾಥಃ (ಸಾಂತ ನಪುಂ) ಪುಷ್ಕರಂ ಸರ್ವತೋಮುಖಂ ಅಂಭಃ ಅರ್ಣಃ — ೨ (ಸಾಂತನ). ತೋಯಂ ಪಾನೀಯಂ ನೀರಂ ಕ್ಷೀರಂ ಅಂಬು (ಉಕಾರಾಂತ ನ) ಶಂಬರಮ್ ಮೇಘಪುಷ್ಪಂ ಘನರಸಂ – ೨೭ ನೀರಿನ ಹೆಸರು. (ಕೃಪೀಟಂ) ಕಾಂಡಂ (ಪುಂ ನ) ಜೀವನೀಯಂ ಕುಶಂ ವಿಷಮ್ – ಇವು ನೀರಿಗೆ ಅಧಿಕ ಪಾಠ.) ಆಪ್ಯಂ ಅಮ್ಮಯಮ್ – ಜಲ ವಿಕಾರದ ಹೆಸರು. ಭಂಗಃ ತರಂಗಃ ಊರ್ಮಿಃ ವೀಚಿಃ – (೨ ಶಬ್ದಗಳು ಪುಂ ಸ್ತ್ರೀ) – ೪ ಅಲೆಗಳ ಹೆಸರು. ॥ ೨೪೦ ॥

ಉಲ್ಲೋಲಃ ಕಲ್ಲೋಲಃ – ೨ ದೊಡ್ಡ ಅಲೆಗಳು. ಆವರ್ತಃ – ಅಂಭಸಾಂ ಭ್ರಮಃ – ನೀರಿನ ಸುಳಿ. ಪೃಷತ್ (ತಾಂತ ನಪುಂ) ಬಿಂದುಃ ಪೃಷತಃ

ಪೃಷಂತಿ ಬಿಂದು ಪೃಷತಾಃ ಪುಮಾಂಸೋ ವಿಪ್ರುಷಃ ಸ್ತ್ರಿಯಃ ||೨೪೨||
ಚಕ್ರಾಣಿ ಪುಟಭೇದಾಸ್ಸ್ಯುರ್ಭ್ರಮಾಶ್ಚ ಜಲನಿರ್ಗಮಾಃ |
ಕೂಲಂ ರೋಧಶ್ಚ ತೀರಂಚ ಪ್ರತೀರಂಚ ತಟಂ ತ್ರಿಷು || ೨೪೩ ||
ಪಾರಾವಾರೇ ಪರಾರ್ವಾಚೀ ತೀರೇ ಪಾತ್ರಂ ತದಂತರಮ್ |
ದ್ವೀಪೋಽಸ್ತ್ರಿಯಾಮಂತರೀಪಂ ಯದಂತರ್ವಾರಿಣಸ್ತಟಮ್ || ೨೪೪ ||
ತೋಯೋತ್ಥಿತಂ ತತ್ಪುಲಿನಂ ಸೈಕತಂ ಸಿಕತಾಮಯಮ್ |
ನಿಷದ್ವರಸ್ತು ಜಂಬಾಲಃ ಪಂಕೋಽಸ್ತ್ರೀ ಶಾದಕರ್ದಮೌ || ೨೪೫ ||
ಜಲೋಚ್ಛ್ವಾಸಾಃ ಪರೀವಾಹಾಃ ಕೂಪಕಾಸ್ತು ವಿದಾರಕಾಃ[೮] |
ನಾವ್ಯಂ[೯] ತ್ರಿಲಿಂಗಂ ನೌತಾರ್ಯೇ ಸ್ತ್ರಿಯಾಂ ನೌಸ್ತರಣಿಸ್ತರಿಃ[೧೦] || ೨೪೬ ||
ಉಡುಪಂ ತು ಪ್ಲವಃ ಕೋಲ ಸ್ರೋತೋಽಂಬುಸರಣಂ ಸ್ವತಃ |
ಆತರಸ್ತರ ಪಣ್ಯಂ ಸ್ಯಾದ್ದ್ರೋಣೀ ಕಾಷ್ಠಾಂಬು ವಾಹಿನೀ || ೨೪೭ ||

---

ವಿಪ್ರುಟ್ (ಷಾಂತ ಸ್ತ್ರೀ) – ೪ ಜಲಬಿಂದು, ನೀರಿನ ತುಂತುರು. ಚಕ್ರಾಣಿ ಪುಟಭೇದಾಃ – ೨ ವಕ್ರವಾಗಿ ಹರಿಯುವ ಹೊಳೆ ಅಥವಾ ಕಾಲುವೆಯ ಕುಟಿಲ ಗತಿ. ಭ್ರಮಾಃ ಜಲನಿರ್ಗಮಾಃ – ೨ ಬಚ್ಚಲು, ಮೋರಿ, ನೀರುದಾರಿ. ಕೂಲಂ ರೋಧಃ (ಸಾಂತನ) ತೀರಂ ಪ್ರತೀರಂ ತಟಂ (ತ್ರಿಲಿಂಗ) – ೫ ದಡದ ಹೆಸರು. ಪಾರಂ ಅವಾರಂ – ೨ ನೀರಿನ ಆಚೆ ಈಚೆ ದಡಗಳ ಹೆಸರು. ಪಾತ್ರಂ – ಎರಡು ದಡಗಳ ಮಧ್ಯೆ ಇರುವ ನೀರು. ದ್ವೀಪಃ (ಪುಂ ನ) ಅಂತ-ರೀಪಂ – ೨ ನೀರಿನ ಮಧ್ಯೆ ಇರುವ ದಿಣ್ಣೆ, ದ್ವೀಪ. ಪುಲಿನಂ — ನೀರಿನಿಂದ ಬಿಡಲ್ಪಟ್ಟ ಮರಳು ದಿಣ್ಣೆ. ಸೈಕತಂ ಸಿಕತಾಮಯಂ – ೨ ಮರಳು ರಾಶಿ ಯಿರುವ ದಡ. ನಿಷದ್ವರಃ ಜಂಬಾಲಃ ಪಂಕಃ (ಪುಂ ನ) ಶಾದಃ ಕರ್ದಮಃ – ೫ ಕೆಸರು. ಜಲೋಚ್ಛ್ವಾಸಾಃ ಪರೀವಾಹಾಃ – ೨ ಮೇಲು ಹೊಳೆ, ನೀರು ತುಳುಕಾಡುವಿಕೆ ಕೂಪಕಾಃ ವಿದಾರಕಾಃ – ೨ ಚಿಲುಮೆ, ನೀರೂರಿ ಬರುವ ಹಳ್ಳ. ನಾವ್ಯಂ (ತ್ರಿಲಿಂಗ) – ೧ ನೌತಾರ್ಯೇ – ಹಡಗು ಅಥವಾ ದೋಣಿ ಮುಂತಾದುವುಗಳಿಂದ ದಾಟಲು ಯೋಗ್ಯವಾದ ಹೊಳೆ, ಅಧಿಕ ಜವವುಳ್ಳ ನದೀ. ನೌಃ (ಓಕಾರಾಂತ ಸ್ತ್ರೀ) ತರಣಿಃ ತರಿಃ [ಸ್ತ್ರೀ] – ೩ ಹಡಗು ದೋಣಿ. ||೨೪೬||

ಉಡುಪಂ ಪ್ಲವಃ ಕೋಲಃ – ೩ ತೆಪ್ಪ, ಹರಿಗೋಲು. ಸ್ರೋತಃ – – ೧ ತಾನಾಗಿ ಹರಿಯುವ ಜಲಪ್ರವಾಹ. ಆತರಃ ತರಪಣ್ಯಂ – ೨ ದೋಣಿ ದಾಟಿಸುವವನಿಗೆ ಕೊಡುವ ಕೂಲಿ. ದ್ರೋಣೀ ಕಾಷ್ಠಾಂಬುವಾಹಿನೀ – ೨ ಚಿಲ್ಲರೆ ಸಾಮಾನುಗಳನ್ನು ಒಯ್ಯುವ ದೋಣಿ. ಸಾಯಾಂತ್ರಿಕಃ ಪೋತವಣಿಕ್

4

ಸಾಂಯಾತ್ರಿಕಃ ಪೋತವಣಿಕ್ ಕರ್ಣಧಾರಸ್ತು ನಾವಿಕಃ ।
ನಿಯಾಮಕಃ ಪೋತವಾಹಾಃ ಕೂಪಕೋ ಗುಣವೃಕ್ಷಕಃ ॥ ೨೪೮ ॥
ನೌಕಾದಂಡಃ ಕ್ಷೇಪಣೀ ಸ್ಯಾದರಿತ್ರಂ ಕೇನಿಪಾತಕಃ ।
ಅಭ್ರಿಃ ಸ್ತ್ರೀ ಕಾಷ್ಠಕುದ್ದಾಲಃ ಸೇಕಪಾತ್ರಂ ತು ಸೇಚನಮ್ ॥೨೪೯॥
ಯಾನಪಾತ್ರಂ ತು ಪೋತೋಽಬ್ಧಿಭವೇ ತ್ರಿಷು ಸಮುದ್ರಿಯಮ್ ।
ಕ್ಲೀಬೇಽರ್ಧನಾವಂನಾವೋರ್ಧೇಽತೀತನೌಕೇಽತಿನು ತ್ರಿಷು ॥ ೨೫೦ ॥
ತ್ರಿಷ್ವಾಗಾಧಾತ್ ಪ್ರಸನ್ನೋಽಚ್ಛಃ ಕಲುಷೋಽನಚ್ಛ ಆವಿಲಃ ।
ನಿಮ್ನಂ ಗಭೀರಂ ಗಂಭೀರ ಮುತ್ತಾನಂ ತದ್ವಿಪರ್ಯಯೇ ॥ ೨೫೧ ॥
ಆಗಾಧಮತಲ ಸ್ಪರ್ಶೇ ಕೈವರ್ತೇ ದಾಶಧೀವರೌ ।
ಆನಾಯಃ ಪುಂಸಿ ಜಾಲಂ ಸ್ಯಾಚ್ಛಣಸೂತ್ರಂ ಪವಿತ್ರಕಮ್ ॥ ೨೫೨ ॥

---

– ೨ ಹಡಗು ವ್ಯಾಪಾರಿ, ವರ್ತಕ, ಕರ್ಣಧಾರಃ, ನಾವಿಕಃ – ಹಡಗು ನಡೆಸುವವನ ಹೆಸರು- ನಿಯಾಮಕಾಃ ಪೋತವಾಹಾಃ – ೨ ಹಡಗು ನಡೆಸುವ ಉಪಾಯ ಹೇಳುವವನು. ಕೂಪಕಃ ಗುಣವೃಕ್ಷಕಃ – ೨ ಹಡಗಿನ ಮೇಲಿನ ಧ್ವಜಸ್ತಂಭ. ನೌಕಾದಂಡಃ ಕ್ಷೇಪಣೀ – ೨ ಹಡಗು ನಡೆಸುವ ಗಡೆ, ತೊಳೆ ಮರದ ಸಾಧನ. ಅರಿತ್ರಂ ಕೇನಿಪಾತಕಃ – ೨ ಹಡಗಿನ ಗಡಿ, ಲಂಗರು. ಅಭ್ರಿಃ[ಸ್ತ್ರೀ] ಕಾಷ್ಠಕುದ್ದಾಲಃ - ೨ ಉಪ್ಪು ಮುಂತಾದುವುಗಳನ್ನು ಅಗಿಯುವ ಮರದ ಗುದ್ದಲಿ. ಸೇಕಪಾತ್ರಂ ಸೇಚನಂ – ೨ ಹಡಗಿನೊಳಕ್ಕೆ ನುಗ್ಗಿದ ನೀರನ್ನು ಚಲ್ಲುವ ಮೊರ, ಗೆರಸೆ, ಯಾನಪಾತ್ರಂ ಪೋತಃ – ೨ ಗಾಳಿಯಪೇಕ್ಷೆ ಇಲ್ಲದೆ ನಡೆಸುವವನಿಂದ ನಡೆಯುವ ಚಿಕ್ಕ ಹಡಗು. ಸಮುದ್ರಿಯಮ್ (ತ್ರಿಷು) ಸಮುದ್ರದಲ್ಲಿ ಹುಟ್ಟಿದ ವಸ್ತು. ಅರ್ಧನಾವಂ – ಅರ್ಧ ಹಡಗು. ಅತಿನು (ತ್ರಿಷು) – ಹಡಗು ದಾಟಹೋದ ವಸ್ತು. ಆಗಾಧಾತ್ (ತ್ರಿಷು) – ಪ್ರಸನ್ನ ಶಬ್ದವನ್ನಾರಂಭಿಸಿ ಗಾಧ ಶಬ್ದದ ವರೆಗೆ ತ್ರಿಲಿಂಗವಾಗುತ್ತದೆ. ಪ್ರಸನ್ನಃ ಅಚ್ಛಃ – ೨ ನಿರ್ಮಲವಾದ ವಸ್ತು. ಕಲುಷಃ ಅನಚ್ಛಃ ಆವಿಲಃ – ೩ ಬಂಡಾಗಿರುವುದು, ಕೆಸರು ಕಲ್ಮಷದಿಂದ ಕೂಡಿರುವುದು. ನಿಮ್ನಂ ಗಭೀರಂ ಗಂಭೀರಂ – ೩ ಆಳವಾಗಿರುವುದು. ಉತ್ತಾನಂ – ೧ ತದ್ವಿಪರ್ಯಯೇ – ಆಳವಿಲ್ಲದಿರುವುದು ॥೨೫೧॥

ಅಗಾಧಂ ಅತಲಸ್ಪರ್ಶಃ — ೨ ಬಹಳ ಆಳವಾಗಿರುವುದು. ಕೈವರ್ತಃ ಧಾಶಃ ಧೀವರಃ — ೩ ಬೆಸ್ತರವನು, ಮೀನು ಹಿಡಿಯುವವನು. ಆನಾಯಃ ಜಾಲಂ — ೨ ಬಲೆಯ ಹೆಸರು. ಶಣಸೂತ್ರಂ ಪವಿತ್ರಕಂ — ೨ ಬಲೆಯ

ಮತ್ಸ್ಯಧಾನೀಕುವೇಣೀ ಸ್ಯಾದ್ಬಡಿಶಂ ಮತ್ಸ್ಯಬಂಧನಮ್ ।
ಪೃಥುರೋಮಾ ಝಷೋ ಮತ್ಸ್ಯೋ ಮೀನೋ ವೈಸಾರಿಣೋಽಂಡಜಃ ॥೨೫೩॥
ವಿಸಾರಶ್ಶಕಲೀ ಚಾಥ ಗಡಕಶ್ಶಕುಲಾರ್ಭಕಃ ।
ಸಹಸ್ರದಂಷ್ಟ್ರಃ ಪಾಠೀನ ಉಲೂಪೀ ಶಿಶುಕಸ್ಸಮೌ ॥ ೨೫೪ ॥
ನಲಮೀನಶ್ಚಿ ಲಿಚಿಮಃ ಪ್ರೋಷ್ಠೀ ತು ಶಫರೀ ದ್ವಯೋಃ ।
ಕ್ಷುದ್ರಾಂಡ ಮತ್ಸ್ಯ ಸಂಘಾತಃ ಪೋತಾಧಾನ ಮಥೋ ಝಷಾಃ ॥೨೫೫॥
ರೋಹಿತೋ ಮದ್ಗುರಶ್ಶಾಲೋ ರಾಜೀವಶ್ಶಕುಲಸ್ತಿಮಿಃ ।
ತಿಮಿಂಗಿಲಾದಯಶ್ಚಾಥ ಯಾದಾಂಸಿ ಜಲಜಂತವಃ ॥ ೨೫೬ ॥
ತದ್ಭೇದಾಶ್ಶಿಂಶುಮಾರೋದ್ರ ಶಂಕವೋ ಮಕರಾದಯಃ ।
ಸ್ಯಾತ್ಕುಳೀರಃ ಕರ್ಕಟಕಃ ಕೂರ್ಮೇ ಕಮಠಕಚ್ಛಪೌ ॥ ೨೫೭ ॥
ಗ್ರಾಹೋಽವಹಾರೋ ನಕ್ರಸ್ತು ಕುಂಭೀರೋಽಥ ಮಹೀಲತಾ ।

---

ಹಗ್ಗ. ಮತ್ಸ್ಯಧಾನೀ ಕುವೇಣೀ – ೨ ಮೀನುಗಳನ್ನು ಹಿಡಿದು ಹಾಕಿಕೊಳ್ಳುವ ಬುಟ್ಟಿ. ಬಡಿಶಂ ಮತ್ಸ್ಯಬಂಧನಂ – ೨ ಗಾಳ. ಪೃಥುರೋಮಾ (ನಾಂತ ಪು) ಝಷಃ ಮತ್ಸ್ಯಃ ಮೀನಃ ವೈಸಾರಿಣಃ ಅಂಡಜಃ ವಿಸಾರಃ ಶಕ (ಕು) ಲೀ (ನಾಂತ ಪು) – ೮ ಮೀನಿನ ಹೆಸರು. ಗಡಿಕಃ ಶಕುಲಾರ್ಭಕಃ – ೨ ಮೀನು ಮರಿಗಳು. ಸಹಸ್ರದಂಷ್ಟ್ರಃ ಪಾಠೀನಃ – ೨ ತುರಿಮುಳ್ಳುಳ್ಳ ಮೀನು, ಸಾವಿರ ಕೋರೆಗಳುಳ್ಳ ಮೀನು. ಉಲೂಪೀ ಶಿಶುಕಃ – ಶಿಶುವಿನ ಹಾಗೆ ಚೆಲುವಾದ ಉಣಚಿ ಮೀನು. ನಲಮೀನಃ ಚಿಲಿಚಿಮಃ – ಹುಲ್ಲುಮೀನು, ಜಂಬು ಮೀನು. ಪ್ರೋಷ್ಠೀ ಶಫರೀ – ಹಾರುವ ಮೀನು, ಮೀಟುಮೀನು. ಕ್ಷುದ್ರಾಂಡಃ ಮತ್ಸ್ಯಸಂಘಾತಃ ಪೋತಾಧಾನಂ – ೩ ಮೀನು ಮರಿಗಳ ಗುಂಪು. ಇನ್ನು ಮುಂದೆ ಮೀನಿನ ಭೇದಗಳು. ರೋಹಿತಃ – ಕೆಂಪು ಮೀನು. ಮದ್ಗುರಃ – ಯಾವಾಗಲೂ ಮುಳುಗಿ ಕೊಂಡಿರುವ ಮೀನು. ಶಾಲಃ – ಬಹಳ ವೇಗವುಳ್ಳ ಮೀನು. ರಾಜೀವಃ – ರಾಜಮೀನು. ಶಕಲಃ – ಶಕ್ತಿಯುಳ್ಳ ಮೀನು. ತಿಮಿಃ – ಬೆಟ್ಟದಂತೆ ದೊಡ್ಡದಾದ ಮೀನು, ನೂರು ಗಾವುದ ನೀಳವಾದ ಮೀನು. ತಿಮಿಂಗಿಲಃ – ತಿಮಿಯನ್ನು ನುಂಗುವ ಮೀನು. ಯಾದಾಂಸಿ (ಸಾಂತ ನ) ಜಲಜಂತವಃ – ೨ ಜಲಜಂತುಗಳ ಹೆಸರು. ॥೨೫೬॥

ಶಿಂಶುಮಾರಃ – ನೆಗಳು. ಉದ್ರಃ – ನೀರುಬೆಕ್ಕು. ಶಂಕುಃ – ನೀರು ಹಂದಿ. ಮಕರಃ – ಚೋರ ಮೀನು. ಕುಳೀರಃ ಕರ್ಕಟಕಃ – ೨ ಏಡಿ. ಕೂರ್ಮಃ ಕಮಠಃ ಕಚ್ಛಪಃ – ಆಮೆ. ಗ್ರಾಹಃ ಅವಹಾರಃ – ೨ ಹಾವು ಮೀನು. ನಕ್ರಃ ಕುಂಭೀರಃ – ೨ ಮೊಸಳೆ. ಮಹೀಲತಾ ಗಂಡುಪದಃ

ಗಂಡೂಃಪದಃ ಕಿಂಚುಲಕೋ ನಿಹಾಕಾ ಗೋಧಿಕಾ ಸಮೇ ॥ ೨೫೮ ॥
ರಕ್ತಪಾತು ಜಲೂಕಾಯಾಂ ಸ್ತ್ರಿಯಾಂ ಭೂಮ್ನಿ ಜಲೌಕಸಃ ।
ಮುಕ್ತಾಸ್ಫೋಟಃ ಸ್ತ್ರಿಯಾಂ ಶುಕ್ತಿಶ್ಶಂಖಸ್ಸ್ಯಾತ್ಕಂಬುರಸ್ತ್ರಿಯಾಂ ॥೨೫೯॥
ಕ್ಷುದ್ರಶಂಖಾಶ್ಶಂಖನಖಾಶ್ಶಂಬೂಕಾ ಜಲಶುಕ್ತಯಃ ।
ಭೇಕೇ ಮಂಡೂಕವರ್ಷಾಭೂ ಶಾಲೂರಪ್ಲವದರ್ದುರಾಃ ॥೨೬೦ ॥
ಶಿಲೀ ಗಂಡೂಪದೀ ಭೇಕೀ ವರ್ಷಾಭ್ವೀ ಕಮಠೀ ಢುಲೀ ।
ಮದ್ಗುರಸ್ಯ ಪ್ರಿಯಾ ಶೃಂಗೀ ದುರ್ನಾಮಾ ದೀರ್ಘಕೋಶಿಕಾ ॥೨೬೧॥
ಜಲಾಶಯೋ ಜಲಾಧಾರಸ್ತತ್ರಾಗಾಧಜಲೀ ಹ್ರದಃ
ಆಹಾವಸ್ತು ನಿಪಾನಂ ಸ್ಯಾದುಪಕೂಪ ಜಲಾಶಯೇ ॥ ೨೬೨ ॥
ಪುಂಸ್ಯೇ ವಾಂಧುಃ ಪ್ರಹಿಃ ಕೂಪ ಉದಪಾನಂ ತು ಪುಂಸಿ ವಾ ।
ನೇಮಿಸ್ತ್ರಿಕಾಸ್ಯ ಪೀನಾಹೋ ಮುಖಬಂಧನಮಸ್ಯಯತ್ ॥ ೨೬೩ ॥
ಪುಷ್ಕರಿಣ್ಯಾಂತು ಖಾತಂ ಸ್ಯಾದಖಾತಂ ದೇವಖಾತಕಮ್ ।

---

ಕಿಂಚುಲಕಃ – ೩ ಕೆಸರಿನಲ್ಲಿರುವ ಎರಬುಹುಳ. ನಿಹಾಕಾ ಗೋಧಿಕಾ – ನೀರಿನಲ್ಲಿರುವ ಉಡ. ರಕ್ತಪಾ ಜಲೂಕಾ ಜಲೌಕಸಃ (ಸಾಂತ ಸ್ತ್ರೀ)– ೩ ರಕ್ತ ಹೀರುವ ಜಿಗಣೆ. ಮುಕ್ತಾಸ್ಫೋಟಃ ಶುಕ್ತಿಃ – ೨ ಮುತ್ತಿನ ಚಿಪ್ಪು. ಶಂಖಃ ಕಂಬುಃ – ಶಂಖದ ಹೆಸರು. ಕ್ಷುದ್ರಶಂಖಾಃ ಶಂಖನಖಾಃ – ಗುಳ್ಳೆ ಶಂಖಗಳು. ಶಂಬೂಕಾಃ ಜಲಶುಕ್ತಯಃ – ಕಪ್ಪೆಚಿಪ್ಪುಗಳು. ಭೇಕಃ ಮಂಡೂಕಃ ವರ್ಷಾಭೂಃ ಶಾಲೂರಃ ಪ್ಲವಃ ದರ್ದುರಃ – ೬ ಕಪ್ಪೆ. ಶಿಲೀ ಗಂಡೂಪದೀ – ಹೆಣ್ಣು ಎರಬು ಹುಳ. ಭೇಕೀ ವರ್ಷಾಭ್ವೀ – ೨ ಹೆಣ್ಣು ಕಪ್ಪೆಯ ಹೆಸರು. ಕಮಠೀ ಢುಲೀ – ಹೆಣ್ಣ ಆಮೆ. ಶೃಂಗೀ – ಮದ್ಗುರವೆಂಬ ಹೆಣ್ಣು ಮೀನು. ದುರ್ನಾಮಾ ದೀರ್ಘಕೋಶಿಕಾ – ಆನೆಗಳ ರಕ್ತ ಹೀರುವ ಜಿಗಣೆ.॥೨೬೧॥

ಜಲಾಶಯಃ ಜಲಾಧಾರಃ – ೨ ನೀರಿರುವ ಸ್ಥಳ. ಹ್ರದಃ – ೧ ಆಳವಾದ ನೀರಿರುವ ಸ್ಥಳ, ಮಡು. ಆಹಾವಃ ನಿಪಾನಂ – ಬಾವಿ ಬಳಿ ನೀರು ಕುಡಿಯಲು ಕಟ್ಟಿರುವ ತೊಟ್ಟಿ. ಅಂಧುಃ ಪ್ರಹಿಃ ಕೂಪಃ ಉದಪಾನಂ (ಪುಂ ನ) – ನೀರು ಸೇದುವ ಬಾವಿ. ನೇಮಿಃ ತ್ರಿಕಾ – ೨ ಬಾವಿಯಿಂದ ನೀರೆತ್ತುವ ಕಪಿಲೆ ರಾಟೆ ಮುಂತಾದವು ಪೀನಾಹಃ – ಅಸ್ಯ ಮುಖಬಂಧನಂ – ಬಾವಿಯ ಮುಚ್ಚಳ. ಪುಷ್ಕರಿಣೀ ಖಾತಂ – ೨ ಚೌಕವಾಗಿ ತೋಡಿದ ಕೊಳ. ಅಖಾತಂ ದೇವಖಾತಂ – ೨ ದೇವತೆಗಳಿಂದ ನಿರ್ಮಿತವಾದ ಪುಣ್ಯತೀರ್ಥ.

ಪದ್ಮಾಕರಸ್ತಟಾಕೋಽಸ್ತ್ರೀ ಕಾಸಾರಸ್ಸರಸೀ ಸರಃ || ೨೬೪ ||
ವೇಶಂತಃ ಪಲ್ವಲಂ ಚಾಲ್ಪಸರೋ ವಾಪೀ ತು ದೀರ್ಘಿಕಾ ||
ಖೇಯಂ ತು ಪರಿಖಾಧಾರಸ್ತ್ವಂಭಸಾಂ ಯತ್ರ ಧಾರಣಂ ||೨೬೫||
ಸ್ಯಾದಾಲವಾಲಮಾವಾಲಮಾವಾಪೋಽಥ ನದೀ ಸರಿತ್ |
ತರಂಗಿಣೀ ಶೈವಲಿನೀ ತಟಿನೀ ಹ್ರಾದಿನೀ ಧುನೀ || ೨೬೬ ||
ಸ್ರೋತಸ್ವಿನೀ ದ್ವೀಪವತೀ ಸ್ರವಂತೀ ನಿಮ್ನಗಾಪಗಾ |
(ಕೂಲಂಕಷಾ ನಿರ್ಝರಿಣೀ ರೋಧೋವಕ್ರಾ, ಸರಸ್ವತೀ)
ಗಂಗಾ ವಿಷ್ಣುಪದೀ ಜಹ್ನುತನಯಾ ಸುರನಿಮ್ನಗಾ || ೨೬೭ ||
ಭಾಗೀರಥೀ ತ್ರಿಪಥಗಾ ತ್ರಿಸ್ರೋತಾ ಭೀಷ್ಮಸೂರಪಿ |
ಕಾಳಿಂದೀ ಸೂರ್ಯತನಯಾ ಯಮುನಾ ಶಮನಸ್ವಸಾ || ೨೬೮ ||
ರೇವಾ ತು ನರ್ಮದಾ ಸೋಮೋದ್ಭವಾ ಮೇಖಲಕನ್ಯಕಾ|
ಕರತೋಯಾ ಸದಾನೀರಾ ಬಾಹುದಾ ಸೈತವಾಹಿನೀ || ೨೬೯ ||
ಶತದ್ರುಸ್ತು ಶಿತದ್ರುಸ್ಸ್ಯಾದ್ವಿಪಾಶಾ ತು ವಿಪಾಟ್ ಸ್ತ್ರಿಯಾವತ್

---

ಮಹಾಜಲ. ಪದ್ಮಾಕರಃ ತಟಾಕಃ (ಪುಂ ನ) — ೨ ತಾವರೆಗಳಿರುವ ಕೆರೆ. ಕಾಸಾರಃ ಸರಸೀ ಸರಃ (ಸಾಂತ ನ) — ೩ ತಾವರೆಗಳಿರುವ ಕೊಳ. ವೇಶಂತಃ ಪಲ್ವಲಂ ಅಲ್ಪಸರಃ (ಸಾಂತ ನ) — ೩ ನೀರಿನ ಕುಂಟೆ, ಕಟ್ಟೆ ಕಟ್ಟದ ನೀರು. ವಾಪೀ ದೀರ್ಘಿಕಾ — ೨ ಕಲ್ಯಾಣೀ, ಕೊಳ, ವಿಶಾಲವಾದ ಭಾವಿ. ಖೇಯಂ ಪರಿಖಾ — ೨ ಕೋಟೆಯ ಸುತ್ತಲೂ ಅಗೆದ ಕಂದಕ. ಆಧಾರಃ — ೧ ಅಣೇ ಕಟ್ಟು ಹಾಕಿದ ಮೇಲೆ ನಿಂತಿರುವ ನೀರಿನ ಕೆರೆ. ಆಲವಾಲಂ ಆವಾಲಂ ಆವಾಪಃ — ೩ ಗಿಡಗಳ ಬುಡದಲ್ಲಿ ಮಾಡಿದ ಪಾತಿ. ನದೀ ಸರಿತ್ (ತಾಂತ ಸ್ತ್ರೀ) ತರಂಗಿಣೀ ಶೈವಲಿನೀ ತಟಿನೀ ಹ್ರಾದಿನೀ ಧುನೀ ಸ್ರೋತಸ್ವಿನೀ ದ್ವೀಪವತೀ ಸ್ರವಂತೀ ನಿಮ್ನಗಾ ಆಪಗಾ — ೧೨ ನದಿಯ ಹೆಸರು. ಕೂಲಂಕಷಾ ನಿರ್ಝರಿಣೀ ರೋಧೋವಕ್ರಾ, ಸರಸ್ವತೀ – ಇವು ಅಧಿಕನಾಮ.

ಗಂಗಾ ವಿಷ್ಣುಪದೀ ಜಹ್ನುತನಯಾ ಸುರನಿಮ್ನಗಾ ಭಾಗೀರಥೀ ತ್ರಿಪಥಗಾ ತ್ರಿಸ್ರೋತಾಃ (ಸಾಂತ) ಭೀಷ್ಮಸೂಃ (ಊಕಾರಾಂತ ಸ್ತ್ರೀ) – ೮ ಗಂಗಾ ನದಿಯ ಹೆಸರು. ಕಾಳಿಂದೀ ಸೂರ್ಯತನಯಾ ಯಮುನಾ ಶಮನಸ್ವಸಾ (ಋಕಾರಾಂತ ಸ್ತ್ರೀ) – ೪ ಯಮುನಾ ನದಿ. ರೇವಾ ನರ್ಮದಾ ಸೋಮೋದ್ಭವಾ ಮೇಖಲಕನ್ಯಕಾ – ೪ ನರ್ಮದಾ ನದಿ. ಕರತೋಯಾ ಸದಾನೀರಾ – ಶಿವನ ಹಸ್ತದಿಂದ ಹುಟ್ಟಿದ ಕರತೋಯಾ ನದೀ. ಬಾಹುದಾ ಸೈತವಾಹಿನೀ – ಬಾಹುದಾನದೀ. ಶತದ್ರುಃ ಶಿತದ್ರುಃ – ಶತದ್ರುವೆಂಬ ನದೀ. ವಿಪಾಶಾ ವಿಪಾಟ್

ಶೋಣೋ ಹಿರಣ್ಯವಾಹಸ್ಸ್ಯಾತ್ಕುಲ್ಯಾಲ್ಪಾ ಕೃತ್ರಿಮಾ ಸರಿತ್ ॥
ಶರಾವತೀ ವೇತ್ರವತೀ ಚಂದ್ರಭಾಗಾ ಸರಸ್ವತೀ ।
(ಗೋದಾವರೀ ಭೀಮರಥೀ ಕೃಷ್ಣವೇಣೀ ಚ ಗೌತಮೀ ।)
ಕಾವೇರೀ ಸರಿತೋಽನ್ಯಾಶ್ಚ ಸಂಭೇದಸ್ಸಿಂಧುಸಂಗಮಃ ॥ ೨೭೧ ॥
ದ್ವಯೋಃ ಪ್ರಣಾಲೀ ಪಯಸಃ ಪದವ್ಯಾಂ ತ್ರಿಷು ತೂತ್ತರೌ ।
ದೇವಿಕಾಯಾಂ ಸರಯ್ವಾಂ ಚ ಭವೇ ದಾವಿಕ ಸಾರವೌ ॥೨೭೨ ॥
ಸೌಗಂಧಿಕಂ ತು ಕಲ್ಹಾರಂ ಹಲ್ಲಕಂ ರಕ್ತಸಂಧ್ಯಕಮ್ ।
ಸ್ಯಾದುತ್ಪಲಂ ಕುವಲಯಮಥ ನೀಲಾಂಬುಜನ್ಮ ಚ ॥ ೨೭೩ ॥
ಇಂದೀವರಂ ಚ ನೀಲೇಽಸ್ಮಿನ್ ಸಿತೇ ಕುಮುದಕೈರವೇ ।
ಶಾಲೂಕಮೇಷಾಂ ಕಂದಸ್ಸ್ಯಾದ್ವಾರಿಪರ್ಣೀತು ಕುಂಭಿಕಾ ॥
ಜಲನೀಲೀ ತು ಶೈವಾಲಂ ಶೈವಲೋಽಥ ಕುಮುದ್ವತೀ ।
ಕುಮುದಿನ್ಯಾಂನಳಿನ್ಯಾಂ ತು ಬಿಸಿನೀಪದ್ಮಿನೀಮುಖಾಃ ॥ ೨೭೪ ॥
ವಾ ಪುಂಸಿ ಪದ್ಮಂ ನಳಿನಮರವಿಂದಂ ಮಹೋತ್ಪಲಮ್ ।

---

(ಶಾಂತ ಸ್ತ್ರೀ) – ವಸಿಷ್ಠನ ಪಾಶವನ್ನು ಬಿಡಿಸಿದ ವಿಪಾಶಾ ನದೀ. ಶೋಣಃ ಹಿರಣ್ಯವಾಹಃ – ೨ ಶೋಣವೆಂಬ ಗಂಡು ಹೊಳೆ. ಕುಲ್ಯಾ – ಕಾಲಿವೆ, ಚಿಕ್ಕನಾಲೆ. ಶರಾವತೀ ವೇತ್ರವತೀ ಚಂದ್ರಭಾಗಾ ಸರಸ್ವತೀ ಗೋದಾವರೀ ಭೀಮರಥೀ ಕೃಷ್ಣವೇಣೀ ಗೌತಮೀ ಕಾವೇರೀ – ಇವು ಆದಿಯಾಗಿ ಆಯಾಯ ನದಿಗಳು ಇರುತ್ತವೆ. ಸಂಭೇದಃ ಸಿಂಧುಸಂಗಮಃ – ೨ ನದೀ ಸಂಗಮದ ಹೆಸರು. ॥೨೭೧॥

ಪ್ರಣಾಲೀ – ಗೋಮುಖ, ನೀರು ಹರಿಯುವ ದಾರಿ. ಮುಂದೆ ಹೇಳುವ ದಾವಿಕ ಸಾರವ ಪದಗಳು ತ್ರಿಲಿಂಗಗಳು. ದಾವಿಕಃ ಸಾರವಃ – ೨ ದೇವಿಕಾನದಿಯಲ್ಲಿಯೂ ಸರಯೂನದಿಯಲ್ಲಿಯೂ ಹುಟ್ಟಿದ ವಸ್ತು. ಸೌಗಂಧಿಕಂ ಕಲ್ಹಾರಂ – ೨ ಕೆಂಪಾಗಿ ಪರಿಮಳವುಳ್ಳ ಕಲ್ಹಾರಕುಸುಮ, ಎಳೇಗೆಂಪುಳ್ಳ ನೈದಿಲೆ. ಹಲ್ಲಕಂ ರಕ್ತಸಂಧ್ಯಕಂ – ಕೆಂಪು ನೈದಿಲೆ. ಉತ್ಪಲಂ ಕುವಲಯಂ – ಸಾಮಾನ್ಯ ನೈದಿಲೆಯ ಹೆಸರು. ನೀಲಾಂಬುಜನ್ಮ (ನಾಂತ ನ) ಇಂದೀವರಂ ಕನ್ನೈದಿಲೇ ಹೆಸರು. ಕುಮುದಂ ಕೈರವಂ – ಬಿಳೀ ನೈದಿಲೆ ಶಾಲೂಕಂ – ಹಿಂದೆ ಹೇಳಿದ ಸೌಗಂಧಿಕಾದಿಗಳ ಗಡ್ಡೆ. ವಾರಿಪರ್ಣೀ ಕುಂಭಿಕಾ – ನೀರುಕಾಗೆ. ಜಲನೀಲೀ ಶೈವಾಲಂ ಶೈವಲಂ – ೩ ಪಾಚಿಯ ಹೆಸರು. ಕುಮುದ್ವತೀ ಕುಮುದಿನೀ – ಬಿಳೀ ನೈದಿಲೇ ಬಳ್ಳಿ. ನಳಿನೀ ಬಿಸಿನೀ ಪದ್ಮಿನೀ – ಕಮಲಲತೆ. ತಾವರೆ ಬಳ್ಳಿ. ಪದ್ಮಂ ( ಪುಂ ನ) ನಳಿನಂ ಅರವಿಂದಂ ಮಹೋತ್ಪಲಂ

ಸಹಸ್ರ ಪತ್ರಂ ಕಮಲಂ ಶತಪತ್ರಂ ಕುಶೇಶಯಮ್ ॥ ೨೭ ॥
ಪಂಕೇರುಹಂ ತಾಮರಸಂ ಸಾರಸಂ ಸರಸೀರುಹಮ್ ।
ಬಿಸಪ್ರಸೂನರಾಜೀವ ಪುಷ್ಕರಾಂಭೋರುಹಾಣಿ ಚ ॥ ೨೭ ॥
ಪುಂಡರೀಕಂ ಸಿತಾಂಭೋಜ ಮಥ ರಕ್ತ ಸರೋರುಹಮ್ ।
ರಕ್ತೋತ್ಪಲಂ ಕೋಕನದಂ ನಾಳೋ ನಾಳಮಥಾಸ್ತ್ರಿಯಾಮ್ ॥೨೮॥
ಮೃಣಾಳಂ ಬಿಸಮಬ್ಜಾದಿ ಕದಂಬೇ ಷಂಡಮಸ್ತ್ರಿಯಾಮ್ ।
ಕರಹಾಟಶ್ಶಿಫಾ ಕಂದಃ ಕಿಂಜಲ್ಕಃ ಕೇಸರೋಽಸ್ತ್ರಿಯಾಮ್ ॥ ೨೯ ॥
ಸಂವರ್ತಿಕಾ ನವದಳಂ ಬೀಜಕೋಶೋ ವರಾಟಕಃ ।

ಇತಿ ವಾರಿವರ್ಗಃ

ಉಕ್ತಂ ಸ್ವರ್ವ್ಯೋಮದಿಕ್ಕಾಲಧೀವಾಕ್ಛಬ್ದಾದಿ ನಾಟ್ಯಕಮ್ ।
ಪಾತಾಳ ಭೋಗಿ ನರಕಂವಾರಿ ಚೈಷಾಂಚ ಸಂಗತಮ್ ॥ ೩೦ ॥

---

ಸಹಸ್ರಪತ್ರಂ ಕಮಲಂ ಶತಪತ್ರಂ ಕುಶೇಶಯಂ ಪಂಕೇರುಹಂ ತಾಮರಸಂ ಸಾರಸಂ ಸರಸೀರುಹಂ ಬಿಸಪ್ರಸೂನಂ ರಾಜೀವಂ ಪುಷ್ಕರಂ ಅಂಭೋರುಹಂ – ೧೬ ತಾವರೆ ಹೂವು. ॥೨೯॥

ಪುಂಡರೀಕಂ ಸಿತಾಂಭೋಜಂ – ಬಿಳೀ ತಾವರೆ ಹೂವು. ರಕ್ತ ಸರೋರುಹಂ ರಕ್ತೋತ್ಪಲಂ ಕೋಕನದಂ – ೩ ಕೆಂಪು ತಾವರೆ ಹೂವು. ನಾಳಃ ನಾಳಂ – ೨ ತಾವರೆ ನೈದಿಲೆ ಮುಂತಾದವುಗಳ ದಂಟು ಮೃಣಾಳಂ ಬಿಸಂ – ೨ ತಾವರೆಯ ದಂಟು, ಕೊಳವಿ. ಷಂಡಂ – ತಾವರೆ ಹೂ ಮುಂತಾದವುಗಳ ಸಮೂಹ. ಕರಹಾಟಃ ಶಿಫಾ ಕಂದಃ – ತಾವರೆಯ ಗಡ್ಡೆ. ಕಿಂಜಲ್ಕಃ ಕೇಸರಃ – ಹೂವುಗಳ ಕುಸುಮ. ಸಂವರ್ತಿಕಾ ನವದಳಂ – ಎಳೇ ಎಸಳು, ಪದರು, ರೇಕು. ಬೀಜಕೋಶಃ ವರಾಟಕಃ – ತಾವರೆ ಕಾಯಿಯ ಹೆಸರು. ॥೩೦॥

ವಾರಿವರ್ಗ ಮುಗಿದಿದೆ

ಇದುವರೆಗೆ ಹೇಳಿದ ವರ್ಗಗಳನ್ನು ಸಂಗ್ರಹಿಸಿ ಕಾಂಡದ ಕೊನೆಯಲ್ಲಿ ಹೇಳುತ್ತಾನೆ. ಉಕ್ತಂ – ಇತಿ. ಸ್ವರ್ – (ಸ್ವರ್ಗ) – ೨ ವ್ಯೋಮ – (ಆಕಾಶ) – ೩ ದಿಕ್ – (ದಿಕ್ಕು) ೪ ಕಾಲ ೫ ಧೀಃ – (ಬುದ್ಧಿ) ೬ ವಾಕ್ – (ಮಾತು) ೭ ಶಬ್ದಾದಿ ೮ ನಾಟ್ಯಕಂ ೯ ಪಾತಾಳ ೧೦ ಭೋಗಿ (ಸರ್ಪ) ೧೧ ನರಕ

ಇತ್ಯಮರಸಿಂಹ ಕೃತೌ ನಾಮಲಿಂಗಾನುಶಾಸನೇ ।
ಸ್ವರ್ಗಾದಿಕಾಂಡಃ ಪ್ರಥಮಸ್ಸಾಂಗ ಏವ ಸಮರ್ಥಿತಃ ॥ ೨೮೧ ॥
ಇತಿ ನಾಮಲಿಂಗಾನುಶಾಸನೇ ಪ್ರಥಮಕಾಂಡಃ

---

೧೨ ವಾರಿ ಏಷಾಂ – ಹೀಗೆ ಈ ಹನ್ನೆರಡಕ್ಕೆ, ಸಂಗತಂ – ಸಂಬಂಧಿಸಿದವುಗಳು, ಉಕ್ತಂ – ಹೇಳಿವೆ. ॥೨೮೦॥

ಅಮರಸಿಂಹಕೃತೌ – ಅಮರಸಿಂಹ ಕವಿಯ ಗ್ರಂಥವಾದ, ನಾಮಲಿಂಗಾನುಶಾಸನೇ – ನಾಮಲಿಂಗಾನುಶಾಸನವೆಂಬ ಕೋಶದಲ್ಲಿ, ಪ್ರಥಮಃ – ಮೊದಲನೆಯದಾದ, ಸ್ವರ್ಗಾದಿ ಕಾಂಡಃ – ಸ್ವರ್ಗವರ್ಗವೇ ಮೊದಲಾದ ವರ್ಗಗಳು, ಸಾಂಗ ಏವ – ಸಮಗ್ರವಾಗಿ, ಇತಿ ಸಮರ್ಥಿತಃ – ಈ ರೀತಿಯಾಗಿ ಸ್ಪಷ್ಟವಾಗಿ ಹೇಳಿದೆ. ॥೨೮೧॥

ಪ್ರಥಮಕಾಂಡ ಸಮಾಪ್ತವಾಗಿದೆ

# ದ್ವಿತೀಯಕಾಂಡಮ್

## ಭೂವರ್ಗಃ ೧

ವರ್ಗಾಃ ಪೃಥ್ವೀಪುರಕ್ಷ್ಮಾಭೃದ್ವನೌಷಧಿಮೃಗಾದಿಭಿಃ ।
ನೃಬ್ರಹ್ಮಕ್ಷತ್ರವಿಟ್ ಶೂದ್ರೈಃ ಸಾಂಗೋಪಾಂಗೈರಿಹೋದಿತಾಃ ॥೨೮೨॥
ಭೂರ್ಭೂಮಿರಚಲಾನಂತಾ ರಸಾ ವಿಶ್ವಂಭರಾ ಸ್ಥಿರಾ ।
ಧರಾ ಧರಿತ್ರೀ ಧರಣಿಃ ಕ್ಷೋಣೀ ಜ್ಯಾ ಕಾಶ್ಯಪೀ ಕ್ಷಿತಿಃ ॥೨೮೩॥
ಸರ್ವಂ ಸಹಾ ವಸುಮತೀ ವಸುಧೋರ್ವೀ ವಸುಂಧರಾ ।
ಗೋತ್ರಾ ಕುಃ ಪೃಥಿವೀ ಪೃಥ್ವೀ ಕ್ಷ್ಮಾವನಿರ್ಮೇದಿನೀ ಮಹೀ ॥೨೮೪॥
(ವಿಪುಲಾ ಗಹ್ವರೀ ಧಾತ್ರೀ ಗೌರಿಲಾ ಕುಂಭಿನೀ ಕ್ಷಮಾ ।
ಜಗತೀ ರತ್ನ ಗರ್ಭಾ ಚ ಭೂತಧಾತ್ರ್ಯಬ್ಧಿಮೇಖಲಾ)
ಮೃನ್ಮೃತ್ತಿಕಾ ಪ್ರಶಸ್ತಾ ತು ಮೃತ್ಸ್ನಾ ಮೃತ್ಸ್ನಾ ಚ ಮೃತ್ತಿಕಾ ।
ಉರ್ವರಾ ಸರ್ವಸಸ್ಯಾಢ್ಯಾ ಸ್ಯಾದೂಷಃ ಕ್ಷಾರಮೃತ್ತಿಕಾ ॥೨೮೫॥

---

ಎರಡನೆಯ ಕಾಂಡಕ್ಕೆ ಭೂಮಿಕಾಂಡವೆಂದು ಹೆಸರು. ಮೊದಲು ಇಲ್ಲಿ ಹೇಳುವ ವರ್ಗಗಳ ಕ್ರಮವನ್ನು ಹೇಳುತ್ತಾನೆ. ಇಹ––ಈ ಎರಡನೆಯ ಕಾಂಡ ದಲ್ಲಿ, ಸಾಂಗೋಪಾಂಗೈಃ––ಅಂಗಪ್ರತ್ಯಂಗಗಳಿಂದ ಕೂಡಿರುವ, ಪೃಥ್ವೀ....ದಿಭಿಃ–ಭೂ, ಪುರ, ಶೈಲ. ವನೌಷಧಿ, ಸಿಂಹಾದಿ (೫ ವರ್ಗಗಳು) ಗಳಿಂದಲೂ, ನೃ.... ದ್ರೈಃ—ಮನುಷ್ಯ, ಬ್ರಹ್ಮ, ವೈಶ್ಯ, ಶೂದ್ರ (೪ ವರ್ಗಗಳು) ವಿಭಾಗದಿಂದ ಕೂಡಿದ, ವರ್ಗಾಃ—ವರ್ಗಗಳು (೯) ಉದಿತಾಃ—ಹೇಳಲ್ಪಟ್ಟವೆ.

ಭೂಃ ಭೂಮಿಃ ಅಚಲಾ ಅನಂತಾ ರಸಾ ವಿಶ್ವಂಭರಾ ಸ್ಥಿರಾ ಧರಾ ಧರಿತ್ರೀ ಧರಣಿಃ ಕ್ಷೋಣೀ ಜ್ಯಾ ಕಾಶ್ಯಪೀ ಕ್ಷಿತಿಃ ಸರ್ವಂಸಹಾ ವಸುಮತೀ ವಸುಧಾ ಉರ್ವೀ ವಸುಂಧರಾ ಗೋತ್ರಾ ಕುಃ ಪೃಥಿವೀ ಪೃಥ್ವೀ ಕ್ಷ್ಮಾ, ಅವನಿಃ ಮೇದಿನೀ ಮಹೀ—ಇವು ೨೭ ಭೂಮಿಯ ಹೆಸರು. ವಿಪುಲಾ ಗಹ್ವರೀ ಧಾತ್ರೀ ಗೌಃ ಇಲಾ ಕುಂಭಿನೀ ಕ್ಷಮಾ ಜಗತೀ ರತ್ನಗರ್ಭಾ ಭೂತಧಾತ್ರೀ ಅಬ್ಧಿಮೇಖಲಾ—೧೧ ಅಧಿಕಪಾಠ.

ಮೃತ್ (ದಕಾರಾಂತ ಸ್ತ್ರೀ) ಮೃತ್ತಿಕಾ—೨ ಮಣ್ಣು. ಮೃತ್ಸ್ನಾ ಮೃತ್ಸ್ನಾ —೨ ಪ್ರಶಸ್ತ ಮೃತ್ತಿಕಾ—ಉತ್ತಮವಾದ ಮಣ್ಣು, ಕೆಮ್ಮಣ್ಣು. ಉರ್ವರಾ— ೧ ಸರ್ವಸಸ್ಯಾಢ್ಯಾ —ಸಕಲ ಪೈರುಪಚ್ಚೆಗಳಿಂದ ತುಂಬಿದ ಭೂಮಿ. ಊಷಃ ಕ್ಷಾರ ಮೃತ್ತಿಕಾ— ೨ ಚೌಳುಮಣ್ಣಿನ ಹೆಸರು. ॥೨೮೫॥

ಇತ್ಯಮರಸಿಂಹ ಕೃತೌ ನಾಮಲಿಂಗಾನುಶಾಸನೇ ।
ಸ್ವರ್ಗಾದಿಕಾಂಡಃ ಪ್ರಥಮಸ್ಸಾಂಗ ಏವ ಸಮರ್ಥಿತಃ ॥ ೨೮೧ ॥
ಇತಿ ನಾಮಲಿಂಗಾನುಶಾಸನೇ ಪ್ರಥಮಕಾಂಡಃ

---

೧೨ ವಾರಿ ಏಷಾಂ – ಹೀಗೆ ಈ ಹನ್ನೆರಡಕ್ಕೆ, ಸಂಗತಂ – ಸಂಬಂಧಿಸಿದವುಗಳು, ಉಕ್ತಂ – ಹೇಳಿವೆ. ॥೨೮೦॥

ಅಮರಸಿಂಹಕೃತೌ – ಅಮರಸಿಂಹ ಕವಿಯ ಗ್ರಂಥವಾದ, ನಾಮಲಿಂಗಾನು ಶಾಸನೇ – ನಾಮಲಿಂಗಾನುಶಾಸನವೆಂಬ ಕೋಶದಲ್ಲಿ, ಪ್ರಥಮಃ – ಮೊದಲನೆಯ ದಾದ, ಸ್ವರ್ಗಾದಿ ಕಾಂಡಃ – ಸ್ವರ್ಗವರ್ಗವೇ ಮೊದಲಾದ ವರ್ಗಗಳು, ಸಾಂಗ ಏವ – ಸಮಗ್ರವಾಗಿ, ಇತಿ ಸಮರ್ಥಿತಃ – ಈ ರೀತಿಯಾಗಿ ಸ್ಪಷ್ಟವಾಗಿ ಹೇಳಿದೆ. ॥೨೮೧॥

ಪ್ರಥಮಕಾಂಡ ಸಮಾಪ್ತವಾಗಿದೆ

# ದ್ವಿತೀಯಕಾಂಡಮ್

## ಭೂವರ್ಗಃ ೧

ವರ್ಗಾಃ ಪೃಥ್ವೀಪುರಕ್ಷ್ಮಾಭೃದ್ವನೌಷಧಿಮೃಗಾದಿಭಿಃ ।
ನೃಬ್ರಹ್ಮಕ್ಷತ್ರವಿಟ್ ಶೂದ್ರೈಃ ಸಾಂಗೋಪಾಂಗೈರಿಹೋದಿತಾಃ ॥೨೮೩॥
ಭೂರ್ಭೂಮಿರಚಲಾನಂತಾ ರಸಾ ವಿಶ್ವಂಭರಾ ಸ್ಥಿರಾ ।
ಧರಾ ಧರಿತ್ರೀ ಧರಣಿಃ ಕ್ಷೋಣೀ ಜ್ಯಾ ಕಾಶ್ಯಪೀ ಕ್ಷಿತಿಃ ॥೨೮೪॥
ಸರ್ವಂ ಸಹಾ ವಸುಮತೀ ವಸುಧೋರ್ವೀ ವಸುಂಧರಾ ।
ಗೋತ್ರಾ ಕುಃ ಪೃಥಿವೀ ಪೃಥ್ವೀ ಕ್ಷ್ಮಾವನಿರ್ಮೇದಿನೀ ಮಹೀ ॥೨೮೫॥
(ವಿಪುಲಾ ಗಹ್ವರೀ ಧಾತ್ರೀ ಗೌರಿಲಾ ಕುಂಭಿನೀ ಕ್ಷಮಾ ।
ಜಗತೀ ರತ್ನ ಗರ್ಭಾ ಚ ಭೂತಧಾತ್ರ್ಯಬ್ಧಿಮೇಖಲಾ)
ಮೃನ್ಮೃತ್ತಿಕಾ ಪ್ರಶಸ್ತಾ ತು ಮೃತ್ಸ್ನಾ ಮೃತ್ಸಾ ಚ ಮೃತ್ತಿಕಾ ।
ಉರ್ವರಾ ಸರ್ವಸಸ್ಯಾಢ್ಯಾ ಸ್ಯಾದೂಷಃ ಕ್ಷಾರಮೃತ್ತಿಕಾ ॥೨೮೬॥

---

ಎರಡನೆಯ ಕಾಂಡಕ್ಕೆ ಭೂಮಿಕಾಂಡವೆಂದು ಹೆಸರು. ಮೊದಲು ಇಲ್ಲಿ ಹೇಳುವ ವರ್ಗಗಳ ಕ್ರಮವನ್ನು ಹೇಳುತ್ತಾನೆ. ಇಹ--ಈ ಎರಡನೆಯ ಕಾಂಡದಲ್ಲಿ, ಸಾಂಗೋಪಾಂಗೈಃ--ಅಂಗಪ್ರತ್ಯಂಗಗಳಿಂದ ಕೂಡಿರುವ, ಪೃಥ್ವೀ....ದಿಭಿಃ-ಭೂ, ಪುರ, ಶೈಲ. ವನೌಷಧಿ, ಸಿಂಹಾದಿ (೫ ವರ್ಗಗಳು) ಗಳಿಂದಲೂ, ನೃ....ದ್ರೈಃ—ಮನುಷ್ಯ, ಬ್ರಹ್ಮ, ವೈಶ್ಯ, ಶೂದ್ರ (೪ ವರ್ಗಗಳು) ವಿಭಾಗದಿಂದ ಕೂಡಿದ, ವರ್ಗಾಃ—ವರ್ಗಗಳು (೯) ಉದಿತಾಃ—ಹೇಳಲ್ಪಟ್ಟವೆ.

ಭೂಃ ಭೂಮಿಃ ಅಚಲಾ ಅನಂತಾ ರಸಾ ವಿಶ್ವಂಭರಾ ಸ್ಥಿರಾ ಧರಾ ಧರಿತ್ರೀ ಧರಣಿಃ ಕ್ಷೋಣೀ ಜ್ಯಾ ಕಾಶ್ಯಪೀ ಕ್ಷಿತಿಃ ಸರ್ವಂಸಹಾ ವಸುಮತೀ ವಸುಧಾ ಉರ್ವೀ ವಸುಂಧರಾ ಗೋತ್ರಾ ಕುಃ ಪೃಥಿವೀ ಪೃಥ್ವೀ ಕ್ಷ್ಮಾ, ಅವನಿಃ ಮೇದಿನೀ ಮಹೀ—ಇವು ೨೭ ಭೂಮಿಯ ಹೆಸರು. ವಿಪುಲಾ ಗಹ್ವರೀ ಧಾತ್ರೀ ಗೌಃ ಇಲಾ ಕುಂಭಿನೀ ಕ್ಷಮಾ ಜಗತೀ ರತ್ನಗರ್ಭಾ ಭೂತಧಾತ್ರೀ ಅಬ್ಧಿಮೇಖಲಾ—೧೧ ಅಧಿಕಪಾಠ.

ಮೃತ್ (ದಕಾರಾಂತ ಸ್ತ್ರೀ) ಮೃತ್ತಿಕಾ—೨ ಮಣ್ಣು. ಮೃತ್ಸ್ನಾ, ಮೃತ್ಸಾ—೨ ಪ್ರಶಸ್ತಾ ಮೃತ್ತಿಕಾ—ಉತ್ತಮವಾದ ಮಣ್ಣು. ಕೆಮ್ಮಣ್ಣು. ಉರ್ವರಾ—೧ ಸರ್ವಸಸ್ಯಾಢ್ಯಾ—ಸಕಲ ಪೈರುಪಚ್ಚೆಗಳಿಂದ ಕೂಡಿದ ಭೂಮಿ. ಊಷಃ ಕ್ಷಾರಮೃತ್ತಿಕಾ— ೨ ಚೌಳುಮಣ್ಣಿನ ಹೆಸರು. ॥೨೮೭॥

ಊಷವಾನೂಷರೋ ದ್ವಾವಪ್ಯನ್ಯಲಿಂಗೌ ಸ್ಥಲಂ ಸ್ಥಲೀ ।
ಸಮಾನೌ ಮರುಧನ್ವಾನೌ ದ್ವೇ ಖಿಲಾಪ್ರಹತೇ ಸಮೇ ॥೨೮೬॥
ತ್ರಿಷ್ವಥೋ ಜಗತೀ ಲೋಕೋ ವಿಷ್ಟಪಂ ಭುವನಂ ಜಗತ್ ।
ಲೋಕೋಽಯಂ ಭಾರತಂ ವರ್ಷಂ ಶರಾವತ್ಯಾಸ್ತು ಯೋಽವಧೇಃ ॥ ೨೮೭ ॥
ದೇಶಃ ಪ್ರಾಗ್ದಕ್ಷಿಣಃ ಪ್ರಾಚ್ಯ ಉದೀಚ್ಯಃ ಪಶ್ಚಿಮೋತ್ತರಃ ।
ಪ್ರತ್ಯಂತೋ ಮ್ಲೇಚ್ಛದೇಶಸ್ಸ್ಯಾನ್ಮಧ್ಯದೇಶಸ್ತು ಮಧ್ಯಮಃ ॥ ೨೮೮ ॥
ಆರ್ಯಾವರ್ತಃ ಪುಣ್ಯ ಭೂಮಿರ್ಮಧ್ಯಂ ವಿಂಧ್ಯ ಹಿಮಾಗಯೋಃ ।
ನೀವೃಜ್ಜನಪದೌ ದೇಶವಿಷಯೌ ತೂಪವರ್ತನಮ್ ॥೨೮೯॥
ತ್ರಿಷ್ವಾಗೋಷ್ಠಾನ್ನಡಪ್ರಾಯೇ ನಡ್ವಾನ್ನಡ್ವಲ ಇತ್ಯಪಿ ।

---

ಊಷವಾನ್ (ತಾಂತ ಪು) ಊಷರಃ — ೨ ಚೌಳುಮಣ್ಣಿರುವ ಪ್ರದೇಶ, ಬಂಜರುದಿಣ್ಣೆ. ಇವೆರಡೂ ವಿಶೇಷ್ಯದ ಲಿಂಗಗಳನ್ನು ಹೊಂದುತ್ತವೆ. ಸ್ಥಲಂ ಸ್ಥಲೀ (ಸ್ತ್ರೀ) — ೨ ಸ್ಥಳದ ಹೆಸರು, ತಾನಾಗಿ ಚದರವಾಗಿ ಸಮವಾಗಿರುವ ಭೂಮಿ. ಸ್ಥಲಂ — ಅಕೃತ್ರಿಮವಾಗಿರುವ ಸ್ಥಳ. ಸ್ಥಲೀ — ಕೃತ್ರಿಮವಾದ ಪ್ರದೇಶ. ಮರುಃ ಧನ್ವಾ (ನಾಂತ ಪು) — ೨ ನಿರ್ಜಲ ಪ್ರದೇಶ, ಮರುಭೂಮಿ. ಖಿಲಂ ಅಪ್ರಹತಂ (ತ್ರಿಲಿಂಗ) — ೨ ಸಮೇ — ಸಮಾನಾರ್ಥಕಗಳು. ಉಳದೇ ಇರುವ ಭೂಮಿ. ಜಗತೀ ಲೋಕಃ ವಿಷ್ಟಪಂ ಭುವನಂ ಜಗತ್ (ತಾಂತ ನಪುಂ) — ೫ ಭೂತಲ, ಭೂಲೋಕ, ಪ್ರಪಂಚ, ಭಾರತಂವರ್ಷಂ — ೧ ಅಯಂ ಲೋಕಃ — ಹಿಮಾಲಯದ ದಕ್ಷಿಣಕ್ಕೂ ಕನ್ಯಾಕುಮಾರಿಯ ಉತ್ತರಕ್ಕೂ ಇರುವ ಕರ್ಮ ಭೂಮಿಯ ಹೆಸರು, ಹಿಂದೂದೇಶ. ಪ್ರಾಚ್ಯಃ — ೧ ಅವಧೇಃ ಶರಾವತ್ಯಾಃ ಪ್ರಾಗ್ ದಕ್ಷಿಣೋಯೋ ದೇಶಃ — ಅವಧಿಯಾಗಿರುವ ಶರಾವತೀ ನದಿಯ ಪೂರ್ವದಕ್ಷಿಣಕ್ಕೆ ಇರುವ, ದೇಶ, ಭಾರತದ ಪೂರ್ವ ದೇಶ. ಉದೀಚ್ಯಃ — ೧ ಪಶ್ಚಿಮೋತ್ತರಃ — ಶರಾವತೀ ನದಿಯ ಪಶ್ಚಿಮ ಮತ್ತು ಉತ್ತರಕ್ಕೆ ಇರುವ ದೇಶ, ಉತ್ತರದೇಶ.

ಮ್ಲೇಚ್ಛದೇಶಃ — ೧ ಭಾರತದ ತುದಿಯಲ್ಲಿರುವ ದೇಶಗಳು, ಪಾಕಿಸ್ಥಾನ ಇತ್ಯಾದಿ. ಮಧ್ಯಮಃ — ೧ ಮಧ್ಯದೇಶಃ — ಭಾರತದ ಮಧ್ಯದೇಶ.

ಆರ್ಯಾವರ್ತಃ ಪುಣ್ಯಭೂಮಿಃ (ಸ್ತ್ರೀ) — ೨ ವಿಂಧ್ಯ ಮತ್ತು ಹಿಮಾಲಯ ಪರ್ವತಗಳ ಮಧ್ಯದಲ್ಲಿರುವ ಭೂಮಿ.

ನೀವೃತ್ (ತಾಂತ ಪು) ಜನಪದಃ — ಜನರು ವಾಸಮಾಡುವ ಗ್ರಾಮಾದಿ ಪ್ರದೇಶಗಳ ಹೆಸರು. ದೇಶಃ ವಿಷಯಃ ಉಪವರ್ತನಂ (ನ) — ೩ ಗ್ರಾಮ ಸಮುದಾಯ ರೂಪವಾದ ತಾಲೂಕು, ಜಿಲ್ಲೆ ಮುಂತಾನ ದೇಶ. ಈ ಐದೂ ದೇಶ ಸಾಮಾನ್ಯವಾಚಕಗಳೆಂದು ಕೆಲವರ ಮತ. ತ್ರಿಷು ಆಗೋಷ್ಠಾತ್ — ನಡ್ವಾನ್

ಕುಮುದ್ವಾನ್ ಕುಮುದಪ್ರಾಯೇ ವೇತಸ್ವಾನ್ ಬಹುವೇತಸೇ || ೨೯೦ ||
ಶಾದ್ವಲಶ್ಶಾದಹರಿತೇ ಸಜಂಬಾಲೇ ತು ಪಂಕಿಲಃ |
ಜಲಪ್ರಾಯಮನೂಪಂ ಸ್ಯಾತ್ಪುಂಸಿ ಕಚ್ಛಸ್ತಥಾವಿಧಃ || ೨೯೧ ||
ಸ್ತ್ರೀ ಶರ್ಕರಾ ಶರ್ಕರಿಲಶ್ಶಾರ್ಕರಶ್ಶರ್ಕರಾವತಿ |
ದೇಶ ಏವಾದಿಮಾವೇವಮುನ್ನೇಯಾಸ್ಸಿಕತಾವತಿ || ೨೯೨ ||
ದೇಶೋ ನದ್ಯಂಬುವೃಷ್ಟ್ಯಂಬು ಸಂಪನ್ನವ್ರೀಹಿಪಾಲಿತಃ |
ಸ್ಯಾನ್ನದೀಮಾತೃಕೋ ದೇವಮಾತೃಕಶ್ಚ ಯಥಾಕ್ರಮಮ್ || ೨೯೩ ||
ಸುರಾಜ್ಞಿ ದೇಶೇ ರಾಜನ್ವಾನ್ ಸ್ಯಾತ್ತತೋಽನ್ಯತ್ರ ರಾಜವಾನ್ |

---

ಶಬ್ದವನ್ನು ಆರಂಭಿಸಿ ಗೋಷ್ಠಶಬ್ದದ ವರೆಗೂ ಹೇಳುವ ಶಬ್ದಗಳು ಮೂರು ಲಿಂಗ ಗಳಾಗುತ್ತವೆ.

ಕುಮುದ್ವಾನ್ (ತಾಂತ) — ೧ ಕುಮುದಪ್ರಾಯೇ — ಬಿಳೀ ನೈದಿಲೆ ಹೂ ಅಧಿಕವಾಗಿರುವ ದೇಶ. ವೇತಸ್ವಾನ್ (ತಾಂತ) — ೧ ಬಹುವೇತಸೇ — ಝುಂಡು ಹುಲ್ಲು ಅಧಿಕವಾಗಿರುವ ದೇಶ. ಬಹಳ ಮತ್ತೀ ಮರವಿರುವ ದೇಶವೆಂದು ಕೆಲವರ ಮತ. ಕಾರೇಕಾಡೆಂದು ಕೆಲವರು ಹೇಳುತ್ತಾರೆ.

ಶಾದ್ವಲಃ — ೧ ಶಾದಹರಿತೇ–ಎಳೇ ಹುಲ್ಲಿನಿಂದ ಹಚ್ಚಗಾದ ದೇಶ. ಪಂಕಿಲಃ —೧ ಸಜಂಬಾಲೇ — ಕೆಸರಿನಿಂದ ಕೂಡಿದ ದೇಶ. ಅನೂಪಂ — ೧ ಜಲಪ್ರಾಯಂ —ನೀರು ಅಧಿಕವಾಗಿರುವ ದೇಶ. ಕಚ್ಛಃ — ೧ ತಥಾವಿಧಃ — ಹಾಗೆಯೇ ನೀರು ಅಧಿಕವಾದ ಚಿಲುಮೆ. ಮಡು ಕೊಳ ಮುಂತಾದವುಗಳ ಸಮೀಪದಲ್ಲಿರುವ ತ್ಯಾವ ವುಳ್ಳ ನೆಲ. ಶರ್ಕರಾ (ಸ್ತ್ರೀ) ಶರ್ಕರಿಲಃ ಶಾರ್ಕರಃ ಶರ್ಕರಾವಾನ್ (ತಾಂತ) — ನರಜು ಕಲ್ಲುಗಳಿರುವ (ಹರಳು ಕಲ್ಲುಗಳು) ದೇಶ. ಆದಿಮೌ ದೇಶೇ ಏವ — ಮೊದಲಿನ ಎರಡು ಶಬ್ದಗಳು ನರಜು ಕಲ್ಲುಳ್ಳ ದೇಶಕ್ಕೆ ಮಾತ್ರ ಹೆಸರು. ಉಳಿದ ಎರಡು ದೇಶಕ್ಕೂ ತದ್ಭಿನ್ನಕ್ಕೂ ಹೆಸರಾಗುತ್ತವೆ. ಏವಂ ಸಿಕತಾವತಿ ಉನ್ನೇಯಾಃ ಹೀಗೆಯೇ ಮರಳುಳ್ಳ ದೇಶಕ್ಕೆ ಸಿಕತಾ ಸಿಕತಿಲ, ಮರಳುಳ್ಳ ಹೊಳೆ ಮುಂತಾದವುಗಳಿಗೆ ಸೈಕತಃ ಸಿಕತಾವಾನ್ ಎಂಬ ಹೆಸರುಗಳನ್ನು ಊಹಿಸಿ ತಿಳಿಯಬೇಕು. ನದೀಮಾತೃಕಃ — ೧ ನದ್ಯಂಬುಸಂಪನ್ನವ್ರೀಹಿಪಾಲಿತಃ ದೇಶಃ ಸ್ಯಾತ್ — ಹೊಳೆಯ ನೀರಿನಿಂದ ಬೆಳೆಯುವ ಪೈರುಳ್ಳ ದೇಶ. ದೇವಮಾತೃಕಃ — ೧ ವೃಷ್ಟ್ಯಂಬುಸಂಪನ್ನವ್ರೀಹಿಪಾಲಿತಃ ದೇಶಃ ಸ್ಯಾತ್ — ಮಳೆ ನೀರಿನ ಆಶ್ರಯ ದಿಂದಲೇ ಬೆಳೆಯುವ ಪೈರುಳ್ಳ ದೇಶ. ರಾಜನ್ವಾನ್ (ತಾಂತ ಪು) — ೧ ಸುರಾಜ್ಞಿ ದೇಶೇ — ಒಳ್ಳೇ ರಾಜನುಳ್ಳ ದೇಶ. ರಾಜವಾನ್ (ತಾಂತ ಪು) — ೧ ತತಃ ಅನ್ಯತ್ರ — ಅಂತಹ ಒಳ್ಳೇ ಅರಸನಿಲ್ಲದ ದೇಶ. ಗೋಷ್ಠಂ ಗೋಸ್ಥಾನಕಂ — ೪

ಗೋಷ್ಠಂ ಗೋಸ್ಥಾನಕಂ ತತ್ತು ಗೌಷ್ಠೀನಂ ಭೂತಪೂರ್ವಕಮ್ ॥ ೨೯೪ ॥
ಪರ್ಯಂತಭೂಃ ಪರಿಸರಸ್ಸೇತುರಾಳೌ ಸ್ತ್ರಿಯಾಂ ಪುಮಾನ್ ।
ವಾಮಲೂರುಶ್ಚ ನಾಕುಶ್ಚ ವಲ್ಮೀಕಂ ಪುಂನಪುಂಸಕಮ್ ॥ ೨೯೫ ॥
ಅಯನಂ ವರ್ತ್ಮ ಮಾರ್ಗಾಧ್ವಪಂಥಾನಃ ಪದವೀ ಸೃತಿಃ ।
ಸರಣಿಃ ಪದ್ಧತಿಃ ಪದ್ಯಾ ವರ್ತನ್ಯೇಕಪದೀತಿ ಚ ॥ ೨೯೬ ॥
ಅತಿಪಂಥಾಸ್ಸುಪಂಥಾಶ್ಚ ಸತ್ಪಥಶ್ಚಾರ್ಚಿತೇಽಧ್ವನಿ ।
ವ್ಯಧ್ವೋ ದುರಧ್ವೋ ವಿಪಥಃ ಕದಧ್ವಾ ಕಾಪಥಃ ಸಮಾಃ ॥ ೨೯೭ ॥
ಅಪಂಥಾಸ್ತ್ವಪಥಂ ತುಲ್ಯೇ ಶೃಂಗಾಟಕಚತುಷ್ಪಥೇ ।
ಪ್ರಾಂತರಂ ದೂರಶೂನ್ಯೋಽಧ್ವಾ ಕಾಂತಾರಂ ವರ್ತ್ಮ ದುರ್ಗಮಮ್ ॥ ೨೯೮ ॥
ಗವ್ಯೂತಿಃ ಸ್ತ್ರೀ ಕ್ರೋಶಯುಗಂ ನಲ್ವಃ ಕಿಷ್ಕುಚತುಶ್ಶತಮ್ ।

---

ದನದ ಕೊಟ್ಟಿಗೆ, ದೊಡ್ಡಿ, ಗೋವುಗಳಿರುವ ಸ್ಥಳ. ಗೌಷ್ಠೀನಂ — ೧ ತತ್ತು ಭೂತಪೂರ್ವಕಂ — ಹಿಂದೆ ದೊಡ್ಡಿಯಾಗಿರುವ ಸ್ಥಳ, ಪೂರ್ವದಲ್ಲಿ ಹಸುವಿನ ಕೊಟ್ಟಿಗೆಯಾಗಿದ್ದ ದೇಶ. ಪರಿಸರಃ ಪರ್ಯಂತಭೂಃ (ಸ್ತ್ರೀ) — ೨ ಗ್ರಾಮ ನಗರದ ಸಮೀಪದಲ್ಲಿರುವ ಭೂಮಿ. ಸೇತುಃ (ಪು) ಆಲಿಃ (ಳಿಃ) (ಸ್ತ್ರೀ) — ೨ ಸೇತುವೆ, ಅಣೇಕಟ್ಟು. ವಾಮಲೂರುಃ ನಾಕುಃ ವಲ್ಮೀಕಂ (ಪುಂ ನಪುಂ) — ೩ ಹುತ್ತದ ಹೆಸರು. ॥ ೨೯೫ ॥

ಅಯನಂ ವರ್ತ್ಮ (ನಾಂತ ನಪುಂ) ಮಾರ್ಗಃ ಅಧ್ವಾ (ನಾಂತ ಪು) ಪಂಥಾಃ (ಪಥಿನ್ ನಾಂತ ಪು) ಪದವೀ ಸೃತಿಃ ಸರಣಿಃ ಪದ್ಧತಿಃ ಪದ್ಯಾ ವರ್ತನೀ ಏಕಪದೀ — (೬ ಸ್ತ್ರೀ) — ೧೨ ದಾರಿಯ ಹೆಸರು, ಹಾದಿ, ಮಾರ್ಗ. ಅತಿಪಂಥಾಃ ಸುಪಂಥಾಃ (ನಾಂತ) ಸತ್ಪಥಃ — ಅರ್ಚಿತೇ ಅಧ್ವನಿ — ಒಳ್ಳೇ ದಾರಿಯ ಹೆಸರು. ವ್ಯಧ್ವಃ ದುರಧ್ವಃ ವಿಪಥಃ ಕದಧ್ವಾ (ನಾಂತ) ಕಾಪಥಃ — ಕೆಟ್ಟ ದಾರಿ, ದುರ್ಮಾರ್ಗ ಅಪಂಥಾಃ (ನಾಂತ) ಅಪಥಂ — ೨ ತಪ್ಪು ದಾರಿ, ಕಳ್ಳದಾರಿ, ಮಾರ್ಗವಿಲ್ಲದಿರುವುದು. ಶೃಂಗಾಟಕಂ ಚತುಷ್ಪಥಂ — ೨ ನಾಲ್ಕು ದಾರಿಗಳು ಕೂಡಿದ ಚೌಕ. ಪ್ರಾಂತರಂ — ೧ ದೂರಶೂನ್ಯಃ ಅಧ್ವಾ — ದೂರವಿಲ್ಲದ ಹಾದಿ, ಮೊಟಕು ಹಾದಿ. ಕಾಂತಾರಂ — ೧ ದುರ್ಗಮಂ ವರ್ತ್ಮ — ಕಳ್ಳಕಾಕರಿಂದ ತುಂಬಿರುವ ಹೋಗಲು ಕಷ್ಟವಾದ ದಾರಿ. ಗವ್ಯೂತಿಃ — ೧ ಕ್ರೋಶಯುಗಂ — ಎರಡು ಮೈಲುಳ್ಳ ಮಾರ್ಗ. ೩ ಹರದಾರಿಯ ಮಾರ್ಗವೆಂದು ಕೆಲವರ ಮತ. ನಲ್ವಃ — ೧ ಕಿಷ್ಕುಚತುಶ್ಶತಂ — ೪೦೦ ಹಸ್ತ ಪರಿಮಾಣವುಳ್ಳ

ಘಂಟಾಪಥಸ್ತು ಸಂಸರಣಂ ತತ್ಪುರಸ್ಯೋಪನಿಷ್ಕರಮ್ ॥ ೯೯ ॥

ಇತಿ ಭೂವರ್ಗಃ

## ಪುರವರ್ಗಃ ೨

ಪೂಃ ಸ್ತ್ರೀ ಪುರೀನಗರ್ಯೌ ವಾ ಪತ್ತನಂ ಪುಟಭೇದನಮ್ ।
ಸ್ಥಾನೀಯಂ ನಿಗಮೋಽನ್ಯತ್ತು ಯನ್ಮೂಲನಗರಾತ್ಪುರಮ್ ॥ ೩೦೦ ॥
ತಚ್ಛಾಖಾನಗರಂ ವೇಶೋ ವೇಶ್ಯಾಜನಸಮಾಶ್ರಯಃ ।
ಆಪಣಸ್ತು ನಿಷದ್ಯಾಯಾಂ ವಿಪಣಿಃ ಪಣ್ಯವೀಥಿಕಾ ॥ ೩೦೧ ॥
ರಥ್ಯಾ ಪ್ರತೋಲೀರ್ವಿಶಿಖಾ ಸ್ಯಾಚ್ಚಯೋ ವಪ್ರಮಸ್ತ್ರಿಯಾಮ್ ।
ಪ್ರಾಕಾರೋ ವರಣಸ್ಸಾಲಃ ಪ್ರಾಚೀನಂ ಪ್ರಾಂತತೋ ವೃತಿಃ ॥ ೩೦೨ ॥
ಭಿತ್ತಿಃ ಸ್ತ್ರೀ ಕುಡ್ಯಮೇಡೂಕಂ ಯದಂತರ್ನ್ಯಸ್ತ ಕೀಕಸಮ್ ।

---

ದಾರಿ. ಘಂಟಾಪಥಸ್ತು ಸಂಸರಣಂ — ೧೦ ಬಿಲ್ಲು ಪರಿಮಾಣವುಳ್ಳ ದಾರಿ, ರಾಜ ಮಾರ್ಗ, ದೊಡ್ಡ ರಸ್ತೆ. ಉಪನಿಷ್ಕರಮ್ — ೧ ಪುರಸ್ಯ ತತ್ — ಪಟ್ಟಣಕ್ಕೆ ಹೋಗುವ ದಾರಿ ॥ ೯೯ ॥

ಭೂವರ್ಗ ಮುಗಿದಿದೆ

ಪೂಃ (ಪುರ್–ರೇಫಾಂತ ಸ್ತ್ರೀ) ಪುರೀ ನಗರೀ (ಪುಂ ಸ್ತ್ರೀ) ಪತ್ತನಂ ಪುಟಭೇದನಂ ಸ್ಥಾನೀಯಂ ನಿಗಮಃ — ೭ ಪಟ್ಟಣದ ಹೆಸರು. ಶಾಖಾನಗರಂ — ೧ ಮೂಲನಗರಾತ್ ಅನ್ಯತ್ ಪುರಂ — ಉಪನಗರ, ಪ್ರಧಾನ ಪಟ್ಟಣದ ಹತ್ತಿರವಿರುವ ಊರು. ವೇಶಃ — ೧ ಸೂಳೆಯರ ಕೇರಿ (ವೇಶ್ಯಾಜನ ಸಮಾಶ್ರಯಃ) ಸೂಳೆಯರು ವಾಸವಾಗಿರುವ ಊರು. ಆಪಣಃ ನಿಷದ್ಯಾ — ೨ ಮಳಿಗೆ, ಅಂಗಡಿ, ಮಂಡಿ. ವಿಪಣಿಃ ಪಣ್ಯವೀಥಿಕಾ — ೨ ಅಂಗಡಿ ಬೀದಿ, ಮಾರುವ ಕೇರಿ. ರಥ್ಯಾ ಪ್ರತೋಲೀಃ ವಿಶಿಖಾ — ೩ (ಸ್ತ್ರೀಲಿಂಗಗಳು) ಊರೊಳಗಿರುವ ಮುಖ್ಯವಾದ ಬೀದಿ, ತಾಳವಾರ, ಚಾವಡಿಜಗಲಿ.'

ಚಯಃ ವಪ್ರಂ (ಪುಂ ನಪುಂ) — ೨ ಕಂದಕ, ಕೋಟೆ ಮುಂತಾದವುಗಳ ಬಳಿ ಹಾಕಿರುವ ಮಣ್ಣು ದಿಣ್ಣೆಯ ಹೆಸರು. ಪ್ರಾಕಾರಃ ವರಣಃ ಸಾಲಃ — ೩ ಕೋಟೆ, ಪಾಗಾರ, ಪೌಳಿ, ಕಿಲ್ಲೆ. ಪ್ರಾಚೀನಂ — ೧ ಪ್ರಾಂತತೋ ವೃತಿಃ — ಊರ ಸುತ್ತಲೂ ಹಾಕಿರುವ ಬೇಲಿ ಮುಂತಾದ ತಡೆ. ಭಿತ್ತಿಃ (ಸ್ತ್ರೀ) ಕುಡ್ಯಂ — ೨ ಗೋಡೆ. ಏಡೂಕಂ — ೧ ಅಂತರ್ನ್ಯಸ್ತಕೀಕಸಂ ತತ್ — ಎಲುಬಿನ

ಗೃಹಂ ಗೇಹೋದವಸಿತಂ ವೇಶ್ಮ ಸದ್ಮ ನಿಕೇತನಮ್ ॥ ೩೦೩ ॥
ನಿಶಾಂತವಸ್ತ್ಯಸದನಂ ಭವನಾಗಾರ ಮಂದಿರಮ್ ।
ಗೃಹಾಃ ಪುಂಸಿ ಚ ಭೂಮ್ನ್ಯೇವ ನಿಕಾಯ್ಯನಿಲಯಾಲಯಾಃ ॥ ೩೦೪ ॥
(ಧಿಷ್ಣ್ಯಮೋಕೋ ನಿವಸನಂ ಸ್ಥಾನಾವಸಥ ವಾಸ್ತು ಚ ।
ಸಂಸ್ಥ್ಯಾಯುಮುಟಜಂ ಧಾಮ ನಿವೇಶಶ್ಶರಣಂ ಕ್ಷಯಃ)
ವಾಸಃ ಕೂಟೋ ದ್ವಯೋಶ್ಶಾಲಸ್ಸಭಾ ಸಂಜವನಂ ತ್ವಿದಮ್ ।
ಚತುಶ್ಶಾಲಂ ಮುನೀನಾಂ ತು ಪರ್ಣಶಾಲೋಟಜೋಽಸ್ತ್ರಿಯಾಮ್ ॥ ೩೦೫ ॥
ಚೈತ್ಯಮಾಯತನಂ ತುಲ್ಯೇ ವಾಜಿಶಾಲಾ ತು ಮಂದುರಾ ।
ಆವೇಶನಂ ಶಿಲ್ಪಿಶಾಲಾ ಪ್ರಪಾ ಪಾನೀಯಶಾಲಿಕಾ ॥ ೩೦೬ ॥
ಮಠಶ್ಛಾತ್ರಾದಿನಿಲಯೋ ಗಂಜಾ ತು ಮದಿರಾಗೃಹಮ್ ।
ಗರ್ಭಾಗಾರಂ ವಾಸಗೃಹಮರಿಷ್ಟಂ ಸೂತಿಕಾಗೃಹಮ್ ॥ ೩೦೭ ॥

---

ಗೋಡೆ, ಸೀಸ ಎಲುಬು ಚೂರುಗಳನ್ನಿಟ್ಟು ಮಾಡಿದ ಗೋಡೆ. ಗೃಹಂ ಗೇಹಂ ಉದವಸಿತಂ ವೇಶ್ಮ (ನಾಂತ ನಪುಂ) ಸದ್ಮ (ನಾಂತ ನಪುಂ) ನಿಕೇತನಂ ನಿಶಾಂತಂ ವಸ್ತ್ಯಂ ಸದನಂ ಭವನಂ ಆಗಾರಂ ಮಂದಿರಂ (ನ) ಗೃಹಾಃ (ಪು ನಿತ್ಯಬಹುವಚನ) ನಿಕಾಯ್ಯಃ ನಿಲಯಃ ಆಲಯಃ — ೧೬ ಮನೆಯ ಹೆಸರು. ಧಿಷ್ಣ್ಯಂ ನಿವಸನಂ ಸ್ಥಾನಂ ಆವಸಥಂ ವಾಸ್ತು (ನ) ಸಂಸ್ಥ್ಯಾಯಂ ಉಟಜಂ ಧಾಮ ನಿವೇಶಂ ಶರಣಂ ಕ್ಷಯಃ — ಅಧಿಕಪಾಠ. ವಾಸಃ ಕೂಟಃ ಶಾಲಃ (ಪುಂ ಸ್ತ್ರೀ) ಸಭಾ — ೪ ಸಭಾಗೃಹ.

ಸಂಜವನಂ ಚತುಶ್ಶಾಲಂ — ೨ ನಾಲ್ಕು ಕಡೆ ಕೈಸಾಲೆಗಳಿದ್ದು ಮಧ್ಯದಲ್ಲಿ ಅಂಗಳವಿರುವ ಮನೆ. ಪರ್ಣಶಾಲಃ ಉಟಜಃ (ಪುಂ ನಪುಂ) — ೨ ಮುನಿಃ ನಾಂ ತತ್ — ಮುನಿಗಳ ಮನೆ. ಚೈತ್ಯಂ ಆಯತನಂ — ೨ ಪರಿಶುದ್ಧವಾದ ಮನೆ, ಬೌದ್ಧರ ಮನೆ, ಜೈನರ ಬಸ್ತಿ, ನಾಸ್ತಿಕಾಲಯ, ತುರುಕರ ಮಸೀದಿ, ಸ್ತೋತ್ರಸ್ಥಾನ. ವಾಜಿಶಾಲಾ ಮಂದುರಾ — ೨ ಅಶ್ವಶಾಲೆ, ಕುದುರೆ ಲಾಯ. ಆವೇಶನಂ — ಶಿಲ್ಪಿಶಾಲಾ — ೨ ವಾಜರ ಮನೆ, ಅಕ್ಕಸಾಲಿಗರ ಮನೆ ಸಾಲು. ಪ್ರಪಾ ಪಾನೀಯಶಾಲಿಕಾ — ೨ ಅರವಟ್ಟಿಗೆ, ನೀರು ಕೊಡುವ ಕಟ್ಟೆ. ಮಠಃ — ೧ ಛಾತ್ರಾದಿ ನಿಲಯಃ — ಗುರು ಶಿಷ್ಯರೂ ಸನ್ಯಾಸಿ ಬ್ರಹ್ಮಚಾರಿಗಳೂ ಇರುವ ಸ್ಥಳ. ಗಂಜಾ ಮದಿರಾಗೃಹಂ — ೨ ಹೆಂಡದಂಗಡಿ, ಸಾರಾಯಿಯನ್ನು ಮಾರುವ ಗಡಂಗು. ಗರ್ಭಾಗಾರಂ ವಾಸಗೃಹಂ — ೨ ಮಲಗುವ ಮನೆ, ಪಡಸಾಲೆ. ಅರಿಷ್ಟಂ ಸೂತಿಕಾಗೃಹಂ — ೨ ಪುರುಡಿನ ಮನೆ, ಪ್ರಸವವಾದ ಕೊಠಡಿ, ಜಾತಾಶೌಚಗೃಹ. ವಾತಾಯನಂ ಗವಾಕ್ಷಃ — ೨ ಕಿಟಕಿ,

ವಾತಾಯನಂ ಗವಾಕ್ಷಸ್ಸ್ಯಾನ್ಮಂಡಪೋಽಸ್ತ್ರೀ ಜನಾಶ್ರಯಃ ।
ಹರ್ಮ್ಯಾದಿರ್ಧನಿನಾಂ ವಾಸಃ ಪ್ರಾಸಾದೋ ದೇವಭೂಭುಜಾಮ್ ॥೩೦೮॥
ಸೌಧೋಽಸ್ತ್ರೀ ರಾಜಸದನಮುಪಕಾರ್ಯೋಪಕಾರಿಕಾ ।
ಸ್ವಸ್ತಿಕಸ್ಸರ್ವತೋ ಭದ್ರೋ ನಂದ್ಯಾವರ್ತಾದಯೋಽಪಿ ಚ ॥ ೩೦೯ ॥
ವಿ (ಪಿ)ಚ್ಛಂದಕಃ ಪ್ರಭೇದಾ ಬಿ ಭವಂತೀಶ್ವರಸದ್ಮನಾಮ್ ।
ಸ್ತ್ರ್ಯಗಾರಂ ಭೂಭುಜಾಮಂತಃಪುರಂ ಸ್ಯಾದವರೋಧನಮ್ ॥೩೧೦॥
ಶುದ್ಧಾಂತಶ್ಚಾವರೋಧಶ್ಚ ಸ್ಯಾದಟ್ಟಃ ಕ್ಷೌಮಮಸ್ತ್ರಿಯಾಮ್ ।
ಪ್ರಘಾಣಪ್ರಘಣಾಲಿಂದಾ ಬಹಿರ್ದ್ವಾರಪ್ರಕೋಷ್ಠಕೇ ॥೩೧೧॥
ಗೃಹಾವಗ್ರಹಣೀ ದೇಹಲ್ಯಂಗಣಂ ಚತ್ವರಾಜಿರೇ ।
ಅಧಸ್ತಾದ್ದಾರುಣಿ ಶಿಲಾ ನಾಸಾದಾರೂಪರಿಸ್ಥಿತಮ್ ॥೩೧೨॥
ಪ್ರಚ್ಛನ್ನಮಂತರ್ದ್ವಾರಂ ಸ್ಯಾತ್ಪಕ್ಷದ್ವಾರಂ ತು ಪಕ್ಷಕಃ ।

---

ಗಾಳಿ ಬರುವ ಕಿಂಡಿ. ಮಂಡಪಃ (ಪುಂ ನ) — ಜನಾಶ್ರಯಃ — ೨ ಆಸ್ಥಾನ ಚಾವಡಿ, ಸಭಾ ಮಂಟಪ, ಕಚೇರಿಃ ಮನೆ. ಹರ್ಮ್ಯಂ — ೧ ಧನಿನಾಂ ವಾಸಃ — ಹಣವಂತರ ಮನೆ, ಧನಿಕರ ಉಪ್ಪರಿಗೆ ಮನೆ. ಪ್ರಾಸಾದಃ — ೧ ದೇವ ಭೂಭುಜಾಂ — ದೇವಸ್ಥಾನ, ರಾಜರ ಮನೆ. ಸೌಧಃ (ಪುಂ ನ) — ರಾಜಸದನಂ — ೨ ಅರಮನೆ, ರಾಜಗೃಹ. ಉಪಕಾರ್ಯಾ ಉಪಕಾರಿಕಾ — ೨ ಅರಸುಗಳ ಬಿಡಾರ. ಸ್ವಸ್ತಿಕಃ ಸರ್ವತೋಭದ್ರಃ ನಂದ್ಯಾವರ್ತಃ, ಆದಿಶಬ್ದದಿಂದ ರುಚಕಃ ನಂದಾವರ್ತಃ ವರ್ಧಮಾನಃ — ಇವು ಒಂದೊಂದೂ ರಾಜಗೃಹ ವಿಶೇಷಕ್ಕೆ ಹೆಸರು. ರಾಜಭವನದಲ್ಲಿ ಅಲಂಕೃತವಾಗಿ ರಚಿಸಿದ ದೇವಸ್ಥಾನ ಮುಂತಾದವುಗಳು.

ಅಂತಃಪುರಂ ಅವರೋಧನಂ ಶುದ್ಧಾಂತಃ ಅವರೋಧಃ — ೪ ಭೂಭುಜಾಂ ಸ್ತ್ರ್ಯಗಾರಂ — ಅರಮನೆ ರಾಣೀವಾಸ, ಜನಾನೀ ತೊಟ್ಟಿ. ಅಟ್ಟ ಕ್ಷೌಮಃ (ಪುಂ ನಪುಂ) — ೨ ಯುದ್ಧಕ್ಕಾಗಿ ಮಂಟಪದ ಮೇಲೆ ಅಥವಾ ಕೋಟೆ ಕೊತ್ತಳದ ಮೇಲೆ ಕಟ್ಟಿರುವ ಅಟ್ಟಾಲಿಕೆ, ಅಟ್ಟ. ಪ್ರಘಾಣಃ ಪ್ರಘಣಃ ಅಳಿಂದಃ — ೩ ತಲೆಬಾಗಿಲ ಮುಂದುಗಡೆ ಇರುವ ಅಂಗಣ. ಗೃಹಾವಗ್ರಹಣೀ ದೇಹಲಿಃ — ೨ ಹೊಸಲು. ಅಂಗಣಂ ಚತ್ವರಂ ಅಜಿರಂ — ೩ ಅಂಗಣದ ಹೆಸರು. ಶಿಲಾ — ೧ ಅಧಸ್ತಾತ್ ದಾರುಣಿ — ಬಾಗಿಲ ಕೆಳಗಡೆ ಹೊಸಲ ಬಳಿ ಅಡ್ಡವಾಗಿ (ತುಳಿಯಲು) ಹಾಕಿರುವ ಮೆಟ್ಟುಹಲಗೆ. ನಾಸಾ — ೧ ಉಪರಿಸ್ಥಿತಂ ದಾರು —ಮೆಟ್ಟುಹಲಗೆಯ ಮೇಲೆ ಇರುವ ಹೊಸಲಿನ ಪೂಜಾಯೋಗ್ಯವಾದ ಮರದ ತುಂಡು. ಪ್ರಚ್ಛನ್ನಂ ಅಂತರ್ದ್ವಾರಂ — ೨ ಒಳಬಾಗಿಲು, ರಹಸ್ಯದ ಬಾಗಿಲು, ಗುಪ್ತದ್ವಾರ. ಪಕ್ಷದ್ವಾರಂ ಪಕ್ಷಕಃ — ೨ ದಿಡ್ಡೀಬಾಗಿಲು.

ವಲೀಕ ನೀಧ್ರೇ ಪಟಲಪ್ರಾಂತೇऽಥ ಪಟಲಂ ಛದಿಃ ||೩೧೩||
ಗೋಪಾನಸೀ ತು ವಲಭೀಚ್ಛಾದನೇ ವಕ್ರದಾರುಣಿ |
ಕಪೋತಪಾಲಿಕಾಯಾಂ ತು ವಿಟಂಕಂ ಪುಂನಪುಂಸಕವತ್ ||೩೧೪||
ಸ್ತ್ರೀ ದ್ವಾರ್ದ್ವಾರಂ ಪ್ರತೀಹಾರಃ ಸ್ಯಾದ್ವಿತರ್ದಿಸ್ತು ವೇದಿಕಾ |
ತೋರಣೋऽಸ್ತ್ರೀ ಬಹಿರ್ದ್ವಾರಂ ಪುರದ್ವಾರಂ ತು ಗೋಪುರವ್ ||೩೧೫||
ಕೂಟಂ ಪೂರ್ದ್ವಾರಿ ಯದ್ಧಸ್ತಿನಖಸ್ತಸ್ಮಿನ್ನಥ ತ್ರಿಷು |
ಕವಾಟಮರರಂ ತುಲ್ಯೇ ತದ್ವಿಷ್ಕಂಭೋರ್ಗಲಂ ನ ನಾ ||೩೧೬||
ಆರೋಹಣಂ ಸ್ಯಾತ್ಸೋಪಾನಂ ನಿಶ್ರೇಣಿಸ್ತ್ವಧಿರೋಹಣೀ |

---

ದೊಡ್ಡ ಬಾಗಿಲ ಮಧ್ಯದಲ್ಲಿ ಮಾಡಿದ ಅಥವಾ ಸಮೀಪದಲ್ಲಿ ಮಾಡಿದ ಚಿಕ್ಕ ಬಾಗಿಲು ವಲೀಕಂ ನೀಧ್ರಂ ಪಟಲಪ್ರಾಂತಂ — ೩ ಮನೆ ಹೊದಿಕೆಯ ತುದಿ, ಮನೆಯ ಮೇಲ್ಮುಚ್ಚಳದ ಅಂಚು, ಸೂರು ಎಂದು ಕರೆಯುತ್ತಾರೆ. ಪಟಲಂ ಛದಿಃ — ೨ ಮನೆಯ ಮೇಲು ಹೊದಿಕೆ, ಛಾವಣಿ, ಮಾಡು. ಗೋಪಾನಸೀ (ಸ್ತ್ರೀ) — ೧ ವಲಭಿಚ್ಛಾದನೇ ವಕ್ರದಾರುಣಿ — ಲೋವೇ ಚೂರಿಗೆ ಆಧಾರವಾದ ಮರದ ಪಟ್ಟಿ, ಮನೆಯ ಮೇಲ್ಭಾಗದಲ್ಲಿ ಹೆಂಚಿನ ತುದಿಯಲ್ಲಿ (ಕೆಳಗಡೆ) ಅಡ್ಡವಾಗಿ ಇರುವ ಮರದ ಹಲಿಗೆ, ಸೂರ ನೀರು ತಡೆಯುವ ಹಲಿಗೆ. ಕಪೋತಪಾಲಿಕಾ ವಿಟಂಕಂ (ಪುಂ ನ) - ೨ ಮನೆಯ ತುದಿಯಲ್ಲಿ ಪಾರಿವಾಳ ಮುಂತಾದ ಹಕ್ಕಿಗಳ ವಾಸಕ್ಕಾಗಿ ಇರುವ ಮರದ ಪಟ್ಟಿ. ||೩೧೪||

ದ್ವಾಃ (ದ್ವಾರ್‌ಶಬ್ದ ರೇಫಾಂತ ಸ್ತ್ರೀ) ದ್ವಾರಂ ಪ್ರತೀಹಾರಃ — ೩ ಬಾಗಿಲ ಹೆಸರು. ವಿತರ್ದಿಃ ವೇದಿಕಾ (ಸ್ತ್ರೀ) — ೨ ಜಗುಲಿ. ತೋರಣಃ (ಪುಂ ನ) — ೧ ಬಹಿರ್ದ್ವಾರಂ — ಮಾವಿನ ಸೊಪ್ಪು ಹೂ ಮುಂತಾದುವುಗಳನ್ನು ಕಟ್ಟುವುದ ಕ್ಕೋಸ್ಕರ ಬಾಗಿಲ ಹೊರಗಡೆ ಕಾಣುವಂತೆ ಎರಡು ಕಂಭಗಳಿಂದ ಕಟ್ಟಿದ ದ್ವಾರ ಬಂಧನ, ಚೌಕಟ್ಟು, ಮನೆಯ ಹೊರಬಾಗಿಲು. ಗೋಪುರಂ — ೧ ಪುರ ದ್ವಾರಂ — ಪಟ್ಟಣದ ಬಾಗಿಲು, ಊರ ಹೊರಬಾಗಿಲು. ಹಸ್ತಿನಖಃ — ೧ ಪೂರ್ದ್ವಾರಿಯತ್ ಕೂಟಂ — ಊರ ಬಾಗಿಲ ಹತ್ತಿರ ಶತ್ರುಗಳು ಬರದಂತೆ ಹಾಕಿರುವ ಮಣ್ಣು ದಿಣ್ಣೆ, ಇಳಿಯಲು ಮಾಡಿರುವ ಹಳ್ಳದಿಣ್ಣೆಯಾದ ಮಣ್ಣಿನ ರಾಶಿ. ಕಪಾ (ವಾ) ಟಂ ಅರರಂ (ತ್ರಿಲಿಂಗ) — ೨ ಬಾಗಿಲಿನ ಹಲಗೆಗಳು, ಮುಚ್ಚಿ ತೆಗೆಯುವ ಕದ. ಅರ್ಗಳಂ (ನ) — ೧ ತದ್ವಿಷ್ಕಂಭಃ — ಬಾಗಿಲು ತೆಗೆಯದಂತೆ ತಡೆಯಾಗಿರುವ ಅಗಳಿ, ಬೋಲ್ಟ್. ಆರೋಹಣಂ ಸೋಪಾನಂ — ೨ ಪಾವಟಿಗೆ, ಮೆಟ್ಟಲು, ಹಂತಗಳು. ನಿಶ್ರೇಣಿಃ ಅಧಿರೋಹಣೀ (ಸ್ತ್ರೀ) ೨ — ಏಣಿ, ನಿಚ್ಚಳಿಗೆ. ಸಂಮಾರ್ಜನೀ ಶೋಧನೀ (ಸ್ತ್ರೀ) — ೨ ಕಸಬರಿಕೆ

ಸಂಮಾರ್ಜನೀ ಶೋಧನೀ ಸ್ಯಾತ್ಸಂಕರೋಽವಕರಸ್ತಯಾ ॥ ೩೧೭ ॥
ಕ್ಷಿಪ್ತೇ ಮುಖಂ ನಿಸ್ಸರಣಂ ಸನ್ನಿವೇಶೋ ನಿಕರ್ಷಣವರ್ ।
ಸಮೌ ಸಂವಸಥಗ್ರಾಮೌ ವೇಶ್ಮ ಭೂರ್ವಾಸ್ತುರಸ್ತ್ರಿಯಾಮ್ ॥೩೧೮॥
ಗ್ರಾಮಾಂತಮುಪಶಲ್ಯಂ ಸ್ಯಾತ್ಸೀಮಸೀಮೇ ಸ್ತ್ರಿಯಾಮುಭೇ ।
ಘೋಷ ಆಭೀರಪಲ್ಲೀ ಸ್ಯಾತ್ಪಕ್ಕಣಶ್ಶಬರಾಲಯಃ ॥೩೧೯॥

ಇತಿ ಪುರವರ್ಗಃ

## ಶೈಲವರ್ಗಃ ೩

ಮಹೀಧ್ರೇ ಶಿಖರಿಕ್ಷ್ಮಾಭೃದಹಾರ್ಯಧರಪರ್ವತಾಃ ।
ಅದ್ರಿಗೋತ್ರ ಗಿರಿಗ್ರಾವಾಚಲ ಶೈಲ ಶಿಲೋಚ್ಚಯಾಃ ॥೩೨೦॥
ಲೋಕಾಲೋಕಶ್ಚಕ್ರವಾಲಸ್ತ್ರಿಕೂಟಸ್ತ್ರಿಕಕುತ್ಸಮೌ ।

---

ಪರಕೆ, ಕಸಗುಡಿಸುವ ಸಾಧನ. ಸಂಕರಃ ಅವಕರಃ — ತಯಾಕ್ಷಿಪ್ತೇ — ಪರಕೆಯಿಂದ ಗುಡಿಸಿದ ಕಸ, ಧೂಳು. ಮುಖಂ ನಿಸ್ಸರಣಂ — ೨ ಮನೇ ತಲೆಬಾಗಿಲು ಹತ್ತಿರವಿರುವ ಬೈಲು, ಅಂಗಳ. ಸಂನಿವೇಶಃ ನಿಕರ್ಷಣಂ — ೨ ಪಟ್ಟಣದ ಸುತ್ತಲೂ ಪುರಜನರು ತಿರುಗಲು ಬಿಡಲ್ಪಟ್ಟ ಬೈಲು, ಊರ ಹೊರಗಿನ ಅಂಗಣ. ಸಂವಸಥಃ ಗ್ರಾಮಃ — ೨ ಗ್ರಾಮ, ಹಳ್ಳಿ. ವೇಶ್ಮಭೂಃ (ಸ್ತ್ರೀ) ವಾಸ್ತು (ಪುಂ ನ) — ಮನೆ ಕಟ್ಟಲು ಯೋಗ್ಯವಾದ ಸ್ಥಳ, ಸೈಟ್. ಗ್ರಾಮಾಂತಂ ಉಪಶಲ್ಯಂ — ೨ ಗ್ರಾಮದ ಸಮೀಪದಲ್ಲಿರುವ ಸ್ಥಳ, ಜಮೀನು. ಸೀಮಾ (ಸೀಮನ್ ನಾಂತ ಸ್ತ್ರೀ) ಸೀಮಾ (ಆಕಾರಾಂತ ಸ್ತ್ರೀ) — ೨ ಗಡಿ, ಎಲ್ಲೆ, ಹದ್ದು, ದೇಶ ವಿಭಾಗದ ಚಿಹ್ನೆ. ಘೋಷಃ ಆಭೀರಪಲ್ಲಿಃ — ೨ ಗೊಲ್ಲರ ಹಳ್ಳಿ, ಗೊಲ್ಲಗೇರಿ, ಪಕ್ಕಣಃ ಶಬರಾಲಯಃ — ೨ ಬೇಡರ ವಸತಿ, ಬೇಡರ ಪಾಳ್ಯ, ಬೇಟೆಗಾರರ ಹಳ್ಳಿ. ॥೩೧೯॥

ಪುರವರ್ಗ ಮುಗಿದಿದೆ

ಮಹೀಧ್ರಃ ಶಿಖರೀ (ನಾಂತ ಪು) ಕ್ಷ್ಮಾಭೃತ್ (ತಾಂತ) ಅಹಾರ್ಯಃ ಧರಃ ಪರ್ವತಃ ಅದ್ರಿಃ ಗೋತ್ರಃ ಗಿರಿಃ ಗ್ರಾವಾ (ನಾಂತ) ಅಚಲಃ ಶೈಲಃ ಶಿಲೋಚ್ಚಯಃ— ೧೩ ಪರ್ವತದ ಹೆಸರು.

ಲೋಕಾಲೋಕಃ ಚಕ್ರವಾಳಃ — ೨ ಭೂಮಿಗೆ ಕೋಟೆಯಂತೆ ಸುತ್ತಿರುವ ಬೆಟ್ಟ. ತ್ರಿಕೂಟಃ ತ್ರಿಕಕುತ್ (ತಾಂತ) ೨ — ಲಂಕೆಯಲ್ಲಿರುವ ಮೂರು ಶಿಖರ

ಅಸ್ತಸ್ತು ಚರಮಕ್ಷ್ಮಾಭೃದುದಯಃ ಪೂರ್ವಪರ್ವತಃ || ೩೨೧ ||
ಹಿಮವಾನ್ನಿಷಧೋ ವಿಂಧ್ಯೋ ಮಾಲ್ಯವಾನ್ಪಾರಿಯಾತ್ರಕಃ |
ಗಂಧಮಾದನ ಮನ್ಯೇ ಚ ಹೇಮಕೂಟಾದಯೋ ನಗಾಃ || ೩೨೨ ||
ಪಾಷಾಣ ಪ್ರಸ್ತರ ಗ್ರಾವೋ ಪಲಾಶ್ಮಾನಶ್ಶಿಲಾ ದೃಷತ್ |
ಕೂಟೋಽಸ್ತ್ರೀ ಶಿಖರಂ ಶೃಂಗಂ ಪ್ರಪಾತಸ್ತ್ವತಟೋ ಭೃಗುಃ || ೩೨೩ ||
ಕಟಕೋಽಸ್ತ್ರೀ ನಿತಂಬೋಽದ್ರೇಃ ಸ್ನುಃ ಪ್ರಸ್ಥಸ್ಸಾನುರಸ್ತ್ರಿಯಾಮ್ |
ಉತ್ಸಃ ಪ್ರಸ್ರವಣಂ ವಾರಿಪ್ರವಾಹೋ ನಿರ್ಝರೋ ಝರಃ || ೩೨೪ ||
ದರೀ ತು ಕಂದರೋ ವಾಸ್ತ್ರೀ ದೇವಖಾತಬಿಲೇ ಗುಹಾ |
ಗಹ್ವರಂ ಗಂಡಶೈಲಾಸ್ತು ಚ್ಯುತಾಃ ಸ್ಥೂಲೋಪಲಾ ಗಿರೇಃ || ೩೨೫ ||
ಖನಿಃ ಸ್ತ್ರೀಯಾಮಾಕರಸ್ಸ್ಯಾತ್ಪಾದಾಃ ಪ್ರತ್ಯಂತಪರ್ವತಾಃ |
ಉಪತ್ಯಕಾದ್ರೇರಾಸನ್ನಾ ಭೂಮಿರೂರ್ಧ್ವಮಧಿತ್ಯಕಾ || ೩೨೬ ||

---

ನ್ನಳ್ಳು ಪರ್ವತ. ಅಸ್ತಃ ಚರಮಕ್ಷ್ಮಾಭೃತ್ (ತಾಂತ) — ೨ ಚರಮಗಿರಿ, ಅಸ್ತಮಯಪರ್ವತ. ಉದಯಃ ಪೂರ್ವಪರ್ವತಃ — ೨ ಪೂರ್ವದಲ್ಲಿರುವ ಮೂಡಲಗಿರಿ ಉದಯಪರ್ವತ. ಹಿಮವಾನ್ (ತಾಂತ) ನಿಷಧಃ ವಿಂಧ್ಯಃ ಮಾಲ್ಯವಾನ್ ಪಾರಿಯಾತ್ರಕಃ ಗಂಧಮಾದನಂ — ಆಯಾಯ ಬೆಟ್ಟಗಳು. ಆದಿ ಪದದಿಂದ ಹೇಮಕೂಟಃ ಸಹ್ಯಃ ಮಹೇಂದ್ರಃ ಕೈಲಾಸಃ — ಇತ್ಯಾದಿ ಪರ್ವತಗಳು ಪ್ರಸಿದ್ಧವಾಗಿವೆ.

ಪಾಷಾಣಃ ಪ್ರಸ್ತರಃ ಗ್ರಾವಃ ಉಪಲಃ ಅಶ್ಮಾ (ನಾಂತ) ಶಿಲಾ ದೃಷತ್ (ದಾಂತ ಸ್ತ್ರೀ) — ೭ ಕಲ್ಲು. ಕೂಟಃ ಶಿಖರಂ (ಪು ನಂ) ಶೃಂಗಂ — ೩ ಪರ್ವತ ಶಿಖರ, ಬೆಟ್ಟದ ತುದಿ. ಪ್ರಪಾತಃ ಅತಟಃ ಭೃಗುಃ — ೩ ಬೆಟ್ಟದ ಪಕ್ಕದಲ್ಲಿ ಕೆಳಕ್ಕೆ ಇಳಿಯಲು ಕಷ್ಟವಾದ ಆಳವಾದ ಸ್ಥಳ. ಕಟಕಃ (ಪುಂ ನ) ನಿತಂಬಃ — ೩ ಪರ್ವತದ ಸಮ ಭೂಮಿ. ಉತ್ಸಃ ಪ್ರಸ್ರವಣಂ — ೨ ಬೆಟ್ಟದ ಚಿಲುಮೆ. ನಿರ್ಝರಃ ಝರಃ — ೨ ವಾರಿ ಪ್ರವಾಹಃ — ಬೆಟ್ಟದ ಝರಿ, ಜಲ ಪ್ರವಾಹ. ದರೀ (ಸ್ತ್ರೀ) ಕಂದರಂ (ಪುಂ ನ) — ೨ ಬೆಟ್ಟದ ಬಿಲ, ಮನೆಯಂತೆ ಕೊರೆದ ಸ್ಥಳ. ಗುಹಾ ಗಹ್ವರಂ — ೨ ದೇವಖಾತಬಿಲೇ — ಬೆಟ್ಟದಲ್ಲಿ ದೈವಿಕ ಶಕ್ತಿಯಿಂದ ಆಗಿರುವ ದೊಡ್ಡ ಬಿಲ, ಗುಹೆ. ಗಂಡಶೈಲಾಃ — ೧ ಗಿರೇಃ ಚ್ಯುತಾಃ ಸ್ಥೂಲೋಪಲಾಃ — ಪರ್ವತದಿಂದ ಜಾರಿ ಉರುಳಿದ ದೊಡ್ಡ ಬಂಡೆ. ಖನೀ (ಸ್ತ್ರೀ) ಆಕರಃ — ೨ ಲೋಹ ರತ್ನಾದಿಗಳು ಹುಟ್ಟುವ ಗಣಿ. ಪಾದಾಃ ಪ್ರತ್ಯಂತ ಪರ್ವತಾಃ ೨ ಉಪಗಿರಿ ಪರ್ವತ ಸಮೀಪದಲ್ಲಿರುವ ಚಿಕ್ಕ ಬೆಟ್ಟ. ಉಪತ್ಯಕಾ — ೧ ಅದ್ರೇಃ ಆಸನ್ನಾ ಭೂಮಿಃ — ಪರ್ವತ ತಪ್ಪಲು, ಕೆಳಗಿರುವ ಭೂಮಿ. ಅಧಿತ್ಯಕಾ —

ಆಹೋಪುರುಷಿಕಾ ದರ್ಪಾದ್ಯಾ ಸ್ಯಾತ್ಸಂಭಾವನಾತ್ಮನಿ ||೬೭೯||
ಅಹಮಹಮಿಕಾ ತು ಸಾ ಸ್ಯಾತ್ಪರಸ್ಪರಂ ಯೋ ಭವತ್ಯಹಂಕಾರಃ |
ದ್ರವಿಣಂ ತರಸ್ಸಹೋಬಲ ಶೌರ್ಯಾಣಿ ಸ್ಥಾಮ ಶುಷ್ಮಂ ಚ ||೬೮೦||
ಶಕ್ತಿಃ ಪರಾಕ್ರಮಪ್ರಾಣೌ ವಿಕ್ರಮಸ್ತ್ವತಿಶಕ್ತಿತಾ |
ವೀರಪಾನಂ ತು ಯತ್ಪಾನಂ ವೃತ್ತೇ ಭಾವಿನಿ ವಾ ರಣೇ ||೬೮೧||
ಯುದ್ಧಮಾಯೋಧನಂ ಜನ್ಯಂ ಪ್ರಧನಂ ಪ್ರವಿದಾರಣಮ್ |
ಮೃಧಮಾಸ್ಕಂದನಂ ಸಂಖ್ಯಂ ಸಮೀಕಂ ಸಾಂಪರಾಯಿಕಮ್ ||೬೮೨||
ಅಸ್ತ್ರಿಯಾಂ ಸಮರಾನೀಕರಣಾಃ ಕಲಹವಿಗ್ರಹೌ |
ಸಂಪ್ರಹಾರಾಭಿಸಂಪಾತಕಲಿ ಸಂಸ್ಫೋಟಸಂಯುಗಾಃ || ೬೮೩||
ಅಭ್ಯಾಮರ್ದಸಮಾಘಾತ ಸಂಗ್ರಾಮಾಭ್ಯಾಗಮಾಹವಾಃ |
ಸಮುದಾಯಃ ಸ್ತ್ರಿಯಃ ಸಂಯತ್ ಸಮಿತ್ಯಾಜಿಸಮಿದ್ಯುಧಃ ||೬೮೪||
ನಿಯುದ್ಧಂ ಬಾಹುಯುದ್ಧೇಽಥ ತುಮುಲಂ ರಣಸಂಕುಲೇ |

---

ಅಹಂಪೂರ್ವಂ — ೨ ಇತಿ ಯಾ ಕ್ರಿಯಾ ಸಾ — ನಾನು ಮುಂದು ತಾನು ಮುಂದು ಎಂದು ನುಗ್ಗಿ ಮಾಡುವ ಕೆಲಸ. ಆಹೋಪುರುಷಿಕಾ — ೧ ದರ್ಪಾತ್ ಆತ್ಮನಿ ಯಾ ಸಂಭಾವನಾ ಸ್ಯಾತ್ — ತಾನೇ ದೊಡ್ಡವನೆಂಬ ಅಹಂಕಾರ. ಅಹಮಹಮಿಕಾ — ೧ ಪರಸ್ಪರಂ ಯಃ ಅಹಂಕಾರಃ ಭವತಿ — ನಾನೇ ಶೂರ, ನಾನೇ ವೀರ ಎಂದು ಹುಟ್ಟುವ ಭಾವನೆ, ಆತ್ಮಸ್ತುತಿ. ದ್ರವಿಣಂ ತರಃ ಸಹಃ (೨ ಸಾಂತ ನ) ಬಲಂ ಶೌರ್ಯಂ ಸ್ಥಾಮ (ನಾಂತ ನ) ಶುಷ್ಮಂ ಶಕ್ತಿಃ ಪರಾಕ್ರಮಃ ಪ್ರಾಣಃ — ೧೦ ಸಾಮರ್ಥ್ಯ, ಶಕ್ತಿ. ವಿಕ್ರಮಃ — ೧ ಅತಿಶಕ್ತಿತಾ — ಹೆಚ್ಚಾದ ಬಲ, ಅತಿಶಕ್ತಿ. ವೀರಪಾನಂ — ೧ ವೃತ್ತೇ ವಾ ಭಾವಿನಿ ರಣೇ ವಾ ಯತ್ ಪಾನಂ — ಕಾಳಗ ನಡೆಯುವಾಗ ಅಥವಾ ಮುಂದೆ ನಡೆಯುತ್ತಿದೆ ಯೆಂದಿರುವಾಗ ಭಟರು ಆಯಾಸವಾಗದಂತೆ ಮಾಡುವ ಮದ್ಯಪಾನ. || ೬೮೧ ||

೬೮೨ ಯುದ್ಧಂ ಆಯೋಧನಂ ಜನ್ಯಂ ಪ್ರಧನಂ ಪ್ರವಿದಾರಣಂ ಮೃಧಂ ಆಸ್ಕಂದನಂ ಸಂಖ್ಯಂ ಸಮೀಕಂ ಸಾಂಪರಾಯಿಕಂ ಸಮರಃ ಅನೀಕಃ ರಣಃ (೩ ಪುಂ ನ) ಕಲಹಃ ವಿಗ್ರಹಃ ಸಂಪ್ರಹಾರಃ ಅಭಿಸಂಪಾತಃ ಕಲಿಃ ಸಂಸ್ಫೋಟಃ ಸಂಯುಗಃ ಅಭ್ಯಾಮರ್ದಃ ಸಮಾಘಾತಃ ಸಂಗ್ರಾಮಃ ಅಭ್ಯಾಗಮಃ ಆಹವಃ ಸಮುದಾಯಃ ಸಂಯತ್ (ತಾಂತ ಸ್ತ್ರೀ) ಸಮಿತಿಃ ಆಜಿಃ ಸಮಿತ್ (ತಾಂತ ಸ್ತ್ರೀ) ಯುತ್ (ಧಾಂತ ಸ್ತ್ರೀ) — ೩೧ ಯುದ್ಧದ ಹೆಸರು. ನಿಯುದ್ಧಂ — ೧ ಬಾಹುಯುದ್ಧೇ — ಆಯುಧವಿಲ್ಲದೇ ಮಾಡುವ ಬಾಹುಯುದ್ಧ, ಕುಸ್ತಿ. ತುಮುಲಂ ೧ — ರಣ ಸಂಕುಲೇ — ಸೇನೆಗಳೂ

ಕ್ಷ್ವೇಡಾ ತು ಸಿಂಹನಾದಸ್ಸ್ಯಾತ್ ಕರಿಣಾಂ ಘಟನಾ ಘಟಾ ॥ ೬೭೫ ॥
ಕ್ರಂದನಂ ಯೋಧಸಂರಾವೋ ಬೃಂಹಿತಂ ಕರಿಗರ್ಜಿತಮ್ ।
ವಿಸ್ಫಾರೋ ಧನುಷಃ ಸ್ವಾನಃ ಪಟಹಾಡಂಬರೌ ಸಮೌ ॥ ೬೭೬ ॥
ಪ್ರಸಭಂ ತು ಬಲಾತ್ಕಾರೋ ಹಠೋಽಥ ಸ್ಖಲಿತಂ ಛಲಮ್ ।
ಅಜನ್ಯಂ ಕ್ಲೀಬಮುತ್ಪಾತ ಉಪಸರ್ಗಸ್ಸಮಂ ತ್ರಯಮ್ ॥ ೬೭೭ ॥
ಮೂರ್ಛಾ ತು ಕಶ್ಮಲಂ ಮೋಹೋಽಪ್ಯವಮರ್ದಸ್ತು ಪೀಡನಂ ।
ಅಭ್ಯವಸ್ಕಂದನಂ ತ್ವಭ್ಯಾಸಾದನಂ ವಿಜಯೋ ಜಯಃ ॥ ೬೭೮ ॥ ೬೭೮
ವೈರಶುದ್ಧಿಃ ಪ್ರತೀಕಾರೋ ವೈರನಿರ್ಯಾತನಂ ಚ ಸಾ ।
ಪ್ರೋದ್ರಾವೋದ್ಧಾವಸಂದ್ರಾವ ಸಂದಾವಾ ವಿದ್ರವೋದ್ರವಃ ॥ ೬೭೯ ॥
ಅಪಕ್ರಮೋಽಪಯಾನಂ ಚ ರಣೇ ಭಂಗಃ ಪರಾಜಯಃ ।
ಪರಾಜಿತಪರಾಭೂತೌ ತ್ರಿಷು ನಷ್ಟತಿರೋಹಿತೌ ॥ ೬೮೦ ॥

---

ಸೇರಿ ಹೋರಾಡುವಿಕೆ, ದ್ವಂದ್ವಯುದ್ಧ. ಕ್ಷ್ವೇಡಾ ಸಿಂಹನಾದಃ — ಯುದ್ಧ ಗರ್ಜನೆ, ವೀರರ ಸಿಂಹನಾದ. ಘಟಾ — ಕರಿಣಾಂ ಘಟನಾ — ಆನೆಗಳ ಗುಂಪು. ಕ್ರಂದನಂ — ಯೋಧಸಂರಾವಃ — ವೀರಭಟರ ಕೂಗು. ಬೃಂಹಿತಂ — ೧ ಕರಿಗರ್ಜಿತಂ — ಆನೆಯ ಕೂಗು. ವಿಸ್ಫಾರಃ — ಧನುಷಃ ಸ್ವಾನಃ — ಧನುಷ್ಟಂಕಾರ, ಬಿಲ್ಲಿನ ಶಬ್ದ. ಪಟಹಃ ಆಡಂಬರಃ — ೨ ರಣಭೇರಿ ಶಬ್ದ. ತಮಟೆ ಮೊದಲಾದ ಧ್ವನಿ. ಪ್ರಸಭಂ ಬಲಾತ್ಕಾರಃ ಹಠಃ — ೩ ನಿರ್ಬಂಧ, ಬಲಾತ್ಕಾರ. ಸ್ಖಲಿತಂ ಛಲಂ — ೨ ಯುದ್ಧದಲ್ಲಿ ಹದ್ದು ಮೀರುವುದು, ಅತಿಕ್ರಮ. ಅಜನ್ಯಂ ಉತ್ಪಾತಃ ಉಪಸರ್ಗಃ — ೩ ಉತ್ಪಾತಗಳು. ಹಗಲು ನಕ್ಷತ್ರ ಕಾಣಿಸುವುದು, ರಕ್ತದ ಮಳೆ, ಇತ್ಯಾದಿ. ॥ ೬೭೭ ॥

ಮೂರ್ಛಾ ಕಶ್ಮಲಂ ಮೋಹಃ — ೩ ಮೈ ಮರೆಯುವಿಕೆ, ಮೂರ್ಛೆ. ಅವಮರ್ದಃ ಪೀಡನಂ — ೨ ಹಿಂಸೆ. ಅಭ್ಯವಸ್ಕಂದನಂ ಅಭ್ಯಾಸಾದನಂ — ಮೋಸದಿಂದ ಶತ್ರುವನ್ನು ಆಕ್ರಮಿಸುವಿಕೆ ವಿಜಯಃ ಜಯಃ — ೨ ಗೆಲುವು, ಜಯ. ವೈರಶುದ್ಧಿಃ ಪ್ರತೀಕಾರಃ ವೈರನಿರ್ಯಾತನಂ — ೩ ಪ್ರತೀಕಾರ, ಹಗೆ ತೀರಿಸಿಕೊಳ್ಳುವುದು. ॥ ೬೭೮ ॥

ಪ್ರೋದ್ರಾವಃ ಉದ್ರಾವಃ ಸಂದ್ರಾವಃ ಸಂದಾವಃ ವಿದ್ರವಃ ದ್ರವಃ ಅಪಕ್ರಮಃ ಅಪಯಾನಂ — ೮ ಸೋತು ಓಡಿಹೋಗುವುದು, ಪಲಾಯನ. ಪರಾಜಯಃ — ೧ ರಣೇ ಭಂಗಃ — ಯುದ್ಧದಲ್ಲಿ ಸೋಲುವುದು, ಅಪಜಯ. ಪರಾಜಿತಃ ಪರಾಭೂತಃ — ೨ ಸೋತವನು. ನಷ್ಟಃ ತಿರೋಹಿತಃ — ಸೋತು ಓಡಿಹೋಗಿ ಮರೆಯಲ್ಲಿ ಅವಿತುಕೊಂಡವನು. ಪ್ರಮಾಪಣಂ ನಿಬರ್ಹಣಂ

ಪ್ರಮಾಪಣಂ ನಿಬರ್ಹಣಂ ನಿಕಾರಣಂ ವಿಶಾರಣಂ ।
ಪ್ರವಾಸನಂ ಪರಾಸನಂ ನಿಷೂದನಂ ನಿಹಿಂಸನಮ್ ॥ ೬೮೧ ॥
ನಿರ್ವಾಸನಂ ಸಂಜ್ಞಪನಂ ನಿರ್ಗ್ರಂಥನಮಪಾಸನಮ್ ।
ನಿಸ್ತರ್ಹಣಂ ನಿಹನನಂ ಕ್ಷಣನಂ ಪರಿವರ್ಜನಮ್ ॥ ೬೮೨ ॥
ನಿರ್ವಾಪಣಂ ವಿಶಸನಂ ಮಾರಣಂ ಪ್ರತಿಘಾತನಮ್ ।
ಉದ್ವಾಸನ ಪ್ರಮಥನ ಕಥನೋಜ್ಜ್ವಾಸನಾನಿ ಚ ॥ ೬೮೩ ॥
ಆಲಂಭ ಪಿಂಜ ವಿಶರ ಘಾತೋನ್ಮಾಥ ವಧಾ (ಅಪಿ)
ಸ್ಯಾತ್ಪಂಚತಾ ಕಾಲಧರ್ಮೋ ದಿಷ್ಟಾಂತಃ ಪ್ರಳಯೋಽತ್ಯಯಃ ॥ ೬೮೪ ॥
ಅಂತೋ ನಾಶೋ ದ್ವಯೋರ್ಮೃತ್ಯುರ್ಮರಣಂ ನಿಧನೋಽಸ್ತ್ರಿಯಾಮ್ ।
ಪರಾಸುಪ್ರಾಪ್ತಪಂಚತ್ವಪರೇತಪ್ರೇತಸಂಸ್ಥಿತಾಃ ॥ ೬೮೫ ॥
ಮೃತಪ್ರಮೀತೌ ತ್ರಿಷ್ವೇತೇ ಚಿತಾ ಚಿತ್ಯಾ ಚಿತಿಃ ಸ್ತ್ರಿಯಾಮ್ ।
ಕಬಂಧೋಽಸ್ತ್ರೀ ಕ್ರಿಯಾಯುಕ್ತಮಪಮೂರ್ಧಕಳೇಬರಮ್ ॥ ೬೮೬ ॥
ಸ್ಮಶಾನಂ ಸ್ಯಾತ್ಪಿತೃವನಂ ಕುಣಪಶ್ಶವಮಸ್ತ್ರಿಯಾಮ್ ।
ಪ್ರಗ್ರಹೋಪಗ್ರಹೌ ಬಂದ್ಯಾಂ ಕಾರಾ ಸ್ಯಾದ್ಬಂಧನಾಲಯೇ ॥ ೬೮೭ ॥

---

ನಿಕಾರಣಂ (ವಿ) ವಿಶಾರಣಂ ಪ್ರವಾಸನಂ ಪರಾಸನಂ ನಿಷೂದನಂ ನಿಹಿಂಸನಂ ನಿರ್ವಾಸನಂ ಸಂಜ್ಞಪನಂ ನಿರ್ಗ್ರಂಥನಂ ಅಪಾಸನಂ ನಿಸ್ತರ್ಹಣಂ ನಿಹನನಂ ಕ್ಷಣನಂ ಪರಿವರ್ಜನಂ ನಿರ್ವಾಪನಂ ವಿಶಸನಂ ಮಾರಣಂ ಪ್ರತಿಘಾತನಂ ಉದ್ವಾಸನಂ ಪ್ರಮಥನಂ ಕ್ರಥನಂ ಉಜ್ಜ್ವಾ (ಚ್ಚ್ವಾ) ಸನಂ ಆಲಂಭಃ ಪಿಂಜಃ ವಿಶರಃ ಘಾತಃ ಉನ್ಮಾಥಃ ವಧಃ — ೩೦ ಕೊಲೆ, ಸಂಹಾರ ಮಾಡುವುದು. ॥ ೬೮೩ ॥

ಪಂಚತಾ ಕಾಲಧರ್ಮಃ ದಿಷ್ಟಾಂತಃ ಪ್ರಳಯಃ ಅತ್ಯಯಃ ಅಂತಃ ನಾಶಃ ಮೃತ್ಯುಃ (ಪುಂ ಸ್ತ್ರೀ) ಮರಣಂ ನಿಧನಃ (ಪುಂ ನ) — ೧೦ ಸಾವು, ಮರಣ. ಪರಾಸುಃ ಪ್ರಾಪ್ತಪಂಚತ್ವಃ ಪರೇತಃ ಪ್ರೇತಃ ಸಂಸ್ಥಿತಃ ಮೃತಃ ಪ್ರಮೀತಃ — ೭ ಸತ್ತವನ ಹೆಸರು. ಚಿತಾ ಚಿತ್ಯಾ ಚಿತಿಃ — ೩ ಚಿತೆ, ಹೆಣವನ್ನು ಸುಡುವುದಕ್ಕೆ ಹಾಕಿದ ಸೌದೆ ರಾಶಿ. ಕಬಂಧಃ — ೧ ಕ್ರಿಯಾಯುಕ್ತಃ ಅಪಮೂರ್ಧ ಕಳೇವರಂ — ತಲೆಯಿಲ್ಲದೆ ಕುಣಿದಾಡುತ್ತಿರುವ ಮುಂಡ. ಸ್ಮಶಾನಂ ಪಿತೃವನಂ — ೨ ಸುಡುಗಾಡು, ಹೆಣ ಸುಡುವ ಅಥವಾ ಹೂಳುವ ಸ್ಥಳ. ಕುಣಪಃ ಶವಃ (ಪುಂ ನ) — ೨ ಹೆಣ, ಸತ್ತ ಪ್ರಾಣಿ. ಪ್ರಗ್ರಹಃ ಉಪಗ್ರಹಃ ಬಂದೀ (ಇಕಾರಾಂತ ಸ್ತ್ರೀ) — ೩ ಖೈದಿ, ಸೆರೆ ಸಿಕ್ಕಿದವನು ಕಾರಾ — ೪ ಬಂಧನಾಲಯೇ — ಬಂದೀಖಾನೆ, ಸೆರೆಮನೆ. ಅಸವಃ ಪ್ರಾಣಾಃ (ಪು ನಿತ್ಯ

ಪುಂಸಿ ಭೂಮ್ನ್ಯಸವಃ ಪ್ರಾಣಾಶ್ಚೈವಂ ಜೀವೋಽಸುಧಾರಣಮ್ ।
ಆಯುರ್ಜೀವಿತ ಕಾಲೋ ನಾ ಜೀವಾತುರ್ಜೀವನೌಷಧಮ್ ॥ ೬೮ ॥

ಇತಿ ಕ್ಷತ್ರಿಯವರ್ಗಃ

## ವೈಶ್ಯವರ್ಗಃ ೮

ಊರವ್ಯಾ ಊರುಜಾ ಅರ್ಯಾ ವೈಶ್ಯಾ ಭೂಮಿಸ್ಪೃಶೋ ವಿಶಃ ।
ಆಜೀವೋ ಜೀವಿಕಾ ವಾರ್ತಾ ವೃತ್ತಿರ್ವರ್ತನ ಜೀವನೇ ॥ ೧೯ ॥
ಸ್ತ್ರಿಯಾಂ ಕೃಷಿಃ ಪಾಶುಪಾಲ್ಯಂ ವಾಣಿಜ್ಯಂ ಚೇತಿ ವೃತ್ತಯಃ ।
ಸೇವಾ ಶ್ವವೃತಿರನೃತಂ ಕೃಷಿರುಂಛಶಿಲಂ ತ್ವೃತಮ್ ॥ ೬೦ ॥
ದ್ವೇ ಯಾಚಿತಾಯಾಚಿತಯೋರ್ಯಥಾಸಂಖ್ಯಂ ಮೃತಾಮೃತೇ ।

---

ಬಹುವಚನಾಂತ) — ೨ ಪ್ರಾಣವಾಯು. ಜೀವಃ ಅಸುಧಾರಣಂ — ೨ ಬದುಕಿರುವುದು, ಪ್ರಾಣ ಧರಿಸಿರುವುದು. ಆಯುಃ (ಸಾಂತ ನ) ಜೀವಿತಕಾಲಃ — ೨ ಆಯುಸ್ಸು, ಬದುಕಿರುವ ಕಾಲ. ಜೀವಾತುಃ ಜೀವನೌಷಧಂ — ಸತ್ತವರನ್ನು ಬದುಕಿಸುವ ಸಂಜೀವನೌಷಧ. ॥ ೬೮ ॥

ಕ್ಷತ್ರಿಯವರ್ಗ ಮುಗಿದಿದೆ.

ಊರವ್ಯಾಃ ಊರುಜಾಃ ಅರ್ಯಾಃ ವೈಶ್ಯಾಃ ಭೂಮಿಸ್ಪೃಶಃ ವಿಶಃ (೨ ಶಾಂತ) — ೬ ವೈಶ್ಯನ ಹೆಸರು. ಆಜೀವಃ ಜೀವಿಕಾ ವಾರ್ತಾ ವೃತ್ತಿಃ ವರ್ತನಂ ಜೀವನಂ — ೬ ಕಸಬು, ಜೀವನೋಪಾಯ. ಕೃಷಿಃ — ಉತ್ತು ಬೆಳೆಯುವುದು. ಪಾಶುಪಾಲ್ಯಂ — ಗೋಸೇವೆ. ವಾಣಿಜ್ಯಂ — ವ್ಯಾಪಾರ. ಈ ೩ ವೈಶ್ಯನ ಜೀವನ, ವೃತ್ತಿಯಾಗುತ್ತದೆ. ಸೇವಾ ಶ್ವವೃತಿಃ — ೨ ಸೇವೆ ಮಾಡಿ ಜೀವಿಸುವುದು, ನೀಚವೃತ್ತಿ, ಶೂದ್ರವೃತ್ತಿ. ಅನೃತಂ — ೧ ವ್ಯವಸಾಯ, ಬೆಳೆ ಮಾಡಿ ಜೀವಿಸುವುದು. ಋತಂ — ೧ ಉಂಛಶಿಲಂ — ಊರು ಕೇರಿಗಳಲ್ಲಿ ಬಿದ್ದಿರುವ ಕಾಳುಗಳನ್ನಾರಿಸಿಕೊಂಡು ತಿನ್ನುವುದು. ಉಂಛವೃತ್ತಿ — ಹೊಲ ಗದ್ದೆಗಳಲ್ಲಿ ಬಿದ್ದಿರುವ ಕಾಳುಗಳನ್ನಾರಿಸಿ ತಿಂದು ಜೀವಿಸುವುದು. ಶಿಲಾವೃತ್ತಿ — ಇವೆರಡಕ್ಕೂ ಋತವೆಂದು ಹೆಸರು. ಮೃತಂ ಅಮೃತಂ — ದ್ವೇ ಯಥಾಸಂಖ್ಯಂ ಯಾಚಿತಾಯಾಚಿತಯೋಃ — ಮೃತವೆಂದರೆ ಬಿಕ್ಷೆಯಿಂದ ಜೀವಿಸುವುದು. ಅಮೃತವೆಂದರೆ ಯಾಚನೆ ಮಾಡದೆ ಸ್ವತಂತ್ರವಾಗಿ ಜೀವಿಸುವುದು. ಸತ್ಯಾನೃತಂ — ೧

ಸತ್ಯಾನೃತಂ ವಣಿಗ್ಭಾವಸ್ಸ್ಯಾದೃಣಂ ಪರ್ಯುದಂಚನಮ್ ॥ ೬೧ ॥
ಉದ್ಧಾರೋರ್ಥಪ್ರಯೋಗಸ್ತು ಕುಸೀದಂ ವೃದ್ಧಿಜೀವಿಕಾ ।
ಯಾಚ್ಞಯಾಪ್ತಂ ಯಾಚಿತಕಂ ನಿಯಮಾದಾಪಮಿತ್ಯಕಮ್ ॥ ೬೨ ॥
ಉತ್ತಮರ್ಣಾಧಮರ್ಣೌ ದ್ವೌ ಪ್ರಯೋಕ್ತೃಗ್ರಾಹಕೌ ಕ್ರಮಾತ್ ।
ಕುಸೀದಕೋ ವಾರ್ಧುಷಿಕೋ ವೃದ್ಧ್ಯಾಜೀವಶ್ಚ ವಾರ್ಧುಷಿಃ ॥ ೬೩ ॥
ಕ್ಷೇತ್ರಾಜೀವಃ ಕರ್ಷಕಶ್ಚ ಕೃಷಿಕಶ್ಚ ಕೃಷೀವಲಃ ।
ಕ್ಷೇತ್ರಂ ವ್ರೈಹೇಯ ಶಾಲೇಯಂ ವ್ರೀಹಿಶಾಲ್ಯುದ್ಭವೋಚಿತಮ್ ॥ ೬೪ ॥
ಯವ್ಯಂ ಯವಕ್ಯಂ ಷಷ್ಟಿಕ್ಯಂ ಯವಾದಿಭವನಂ ಹಿ ತತ್ ।
ತಿಲ್ಯತೈಲೀನವನ್ಮಾಷೋ ಮಾಣುಭಂಗಾದ್ದ್ವಿರೂಪತಾ ॥ ೬೫ ॥
ಮೌದ್ಗೀನಕೌದ್ರವೀಣಾದಿ ಶೇಷಧಾನ್ಯೋದ್ಭವಕ್ಷಮಮ್ ।

---

ವಣಿಗ್ಭಾವಃ — ವರ್ತಕನ ವ್ಯಾಪಾರ, ಸುಳ್ಳನ್ನು ನಿಜವನ್ನು ಹೇಳಿ ಸಂಪಾದಿಸುವುದು. ಋಣಂ ಪರ್ಯುದಂಚನಂ ಉದ್ಧಾರಃ — ೩ ಸಾಲ. ಕಡ. ಅರ್ಥಪ್ರಯೋಗಃ ಕುಸೀದಂ ವೃದ್ಧಿಜೀವಿಕಾ — ೩ ಹಣದ ಬಡ್ಡಿ. ಸಾಲದಿಂದ ಬರುವ ಬಡ್ಡಿ ಹಣ. ಯಾಚಿತಕಂ — ೧ ಯಾಚ್ಞ ಯಾ ಆಪ್ತಂ — ಯಾಚನೆ ಮಾಡಿ ಸಂಪಾದಿಸಿದ್ದು. ಆಪಮಿತ್ಯಕಂ — ನಿಯಮಾದಾಪ್ತಂ — ಒಂದನ್ನು ಕೊಟ್ಟು ಇನ್ನೊಂದನ್ನು ತಂದದ್ದು ಉತ್ತಮರ್ಣಃ — ಸಾಲ ಕೊಟ್ಟವನು. ಅಧಮರ್ಣಃ — ಸಾಲ ತೆಗೆದುಕೊಂಡವನು. (ಕ್ರಮಾತ್ ಪ್ರಯೋಕ್ತೃಗ್ರಾಹಕೌ) ಕುಸೀದಕಃ ವಾರ್ಧುಷಿಕಃ ವೃದ್ಧ್ಯಾಜೀವಃ ವಾರ್ಧುಷಿಃ — ೪ ಬಡ್ಡಿಯಿಂದ ಜೀವನ ಮಾಡುವವನು. ಕ್ಷೇತ್ರಾಜೀವಃ ಕರ್ಷಕಃ ಕೃಷಿಕಃ ಕೃಷೀವಲಃ — ೪ ವ್ಯವಸಾಯ ಮಾಡುವವನು. ಕೃಷಿಜೀವಿ. ॥ ೬೪ ॥

ವ್ರೈಹೇಯಂ ಶಾಲೇಯಂ — ೨ ಶಾಲ್ಯುದ್ಭವೋಚಿತಂ ಕ್ಷೇತ್ರಂ — ಭತ್ತ ದೊಡ್ಡ ಭತ್ತ ಬೆಳೆಯುವ ಗದ್ದೆ. ಯವ್ಯಂ ಯವಕ್ಯಂ — ೨ ಯವೆಯೆಂಬ ಧಾನ್ಯ. ಸಣ್ಣಕ್ಕಿ, ಗೋಧಿ ಮೊದಲಾದವುಗಳನ್ನು ಬೆಳೆಯುವ ಗದ್ದೆ. ಷಷ್ಟಿಕ್ಯಂ — ೬೦ ದಿನಗಳಲ್ಲಿ ಬೆಳೆಯುವ ಧಾನ್ಯವುಳ್ಳ ಗದ್ದೆ. ತಿಲ್ಯಂ ತೈಲೀನಂ — ೨ ಎಳ್ಳು ಬೆಳೆಯುವ ಭೂಮಿ. ಇದರಂತೆಯೇ — ಮಾಷೋಮಾಣುಭಂಗಾತ್ ದ್ವಿರೂಪತಾ — ಮಾಷಾದಿ ಪದಗಳಿಂದ ಎರಡು ರೂಪ ತಿಳಿಯಬೇಕು. ಮಾಷ್ಯಂ ಮಾಷೀಣಂ — ಉದ್ದು ಬೆಳೆಯುವ ಭೂಮಿ ಉಮ್ಯಂ ಔಮೀನಂ — ಅಲಸಂದೆ ಬೆಳೆಯುವ ಭೂಮಿ. ಆಣವ್ಯಂ ಆಣವೀನಂ — ನವಣೆ ಬೆಳೆಯುವ ಗದ್ದೆ. ಭಂಗ್ಯಂ ಭಾಂಗೀನಂ — ಸೆಣಬು ಬೆಳೆಯುವ ಭೂಮಿ. ಮೌದ್ಗೀನಂ — ಹೆಸರು ಬೆಳೆಯುವ ಭೂಮಿ. ಕೌದ್ರವೀಣಂ — ಹಾರಕ ಬೆಳೆಯುವ ಭೂಮಿ. ಬೀಜಾ

ಬೀಜಾಕೃತಂ ತೂಪ್ತಕೃಷ್ಟಂ ಸೀತ್ಯಂ ಕೃಷ್ಟಂ ಚ ಹಲ್ಯವತ್ ॥ ೧೯೬ ॥
ತ್ರಿಗುಣಾಕೃತಂ ತೃತೀಯಾಕೃತಂ ತ್ರಿಹಲ್ಯಂ ತ್ರೀಸೀತ್ಯಮಪಿ ತಸ್ಮಿನ್ ।
ದ್ವಿಗುಣಾಕೃತೇ ತು ಸರ್ವಂ ಪೂರ್ವಂ ಶಂಬಾಕೃತಮಪೀಹ ॥ ೧೯೭ ॥
ದ್ರೋಣಾಢಕಾದಿವಾಪಾದೌ ದ್ರೌಣಿಕಾಢಕಿಕಾದಯಃ ।
ಖಾರೀವಾಪಸ್ತು ಖಾರೀಕ ಉತ್ತಮರ್ಣಾದಯಸ್ತ್ರಿಷು ॥ ೧೯೮ ॥
ಪುಂನಪುಂಸಕಯೋರ್ವಪ್ರಃ ಕೇದಾರಃ ಕ್ಷೇತ್ರಮಸ್ಯ ತು ।
ಕೈದಾರಕಂ ಸ್ಯಾತ್ಕೈದಾರ್ಯಂ ಕ್ಷೈತ್ರಂ ಕೈದಾರಿಕಂ ಗಣೇ ॥ ೧೯೯ ॥
ಲೋಷ್ಟಾನಿ ಲೇಷ್ಟವಃ ಪುಂಸಿ ಕೋಟಿಶೋ ಲೋಷ್ಟಭೇದನಃ ।
ಪ್ರಾಜನಂ ತೋದನಂ ತೋತ್ರಂ ಖನಿತ್ರಮವದಾರಣಮ್ ॥ ೨೦೦ ॥
ದಾತ್ರಂ ಲವಿತ್ರಮಾಬಂಧೋ ಯೋತ್ರಂ ಯೋಕ್ತ್ರಮಥೋ ಹ (ಫ) ಲಮ್ ।
ನಿರೀಶಂ ಕುಟಕಂ ಫಾಲಃ ಕೃಷಕೋ ಲಾಂಗಲಂ ಹಲಮ್ ॥ ೨೦೧ ॥

---

ಕೃತಂ ಉಪ್ತಕೃಷ್ಟಂ — ೨ ಬೀಜ ಬಿತ್ತಿದ ಮೇಲೆ ಉತ್ತ ಭೂಮಿ. ಸೀತ್ಯಂ ಕೃಷ್ಟಂ ಹಲ್ಯಂ — ೩ ಉತ್ತು ಹದಮಾಡಿದ ಗದ್ದೆ. ತ್ರಿಗುಣಾಕೃತಂ ತೃತೀಯಾಕೃತಂ ದ್ವಿಹಲ್ಯಂ ದ್ವೀಸೀತ್ಯಂ ಶಂಬಾಕೃತಂ — ೫ ಅಡ್ಡವಾಗಿ ೧ ಸಲ ಉದ್ದವಾಗಿ ೧ ಸಲ ಹೀಗೆ ೨ ಸಾರಿ ಉತ್ತಿರುವ ಭೂಮಿ. ದ್ರೌಣಿಕಂ — ೪ ಕೊಳಗ ಬೀಜವರಿ ಭೂಮಿ. ಆಢಕಂ — ೧ ಕೊಳಗ ಬೀಜವರಿ ಭೂಮಿ. ಪ್ರಾಸ್ಥಿಕಂ ೧ ಸೇರು ಬೀಜವರಿ ಭೂಮಿ. ಖಾರೀಕಃ — ಖಾರೀವಾಪಃ — ೧ ಖಂಡುಗ ಬೀಜವರಿ ಭೂಮಿ. ಉತ್ತಮರ್ಣಾದಯಃ ತ್ರಿಷು — ಉತ್ತಮರ್ಣ ಪದದಿಂದ ಖಾರೀಕ ಶಬ್ದದವರೆಗೂ ಇರುವ ಶಬ್ದಗಳು ತ್ರಿಲಿಂಗಗಳಾಗುತ್ತವೆ ॥ ೧೯೮ ॥

ವಪ್ರಂ ಕೇದಾರಂ ಕ್ಷೇತ್ರಂ (ಪುಂ ನ) — ೩ ಭತ್ತದ ಗದ್ದೆ. ಕೈದಾರಕಂ ಕೈದಾರ್ಯಂ ಕ್ಷೈತ್ರಂ ಕೈದಾರಿಕಂ — ೪ ಗದ್ದೆಯ ಗುಂಪು, ಗದ್ದೆ ಬಯಲು. ಲೋಷ್ಟಂ ಲೇಷ್ಟುಃ (ಪು) — ೨ ಮಂಣು ಹೆಂಟೆ. ಕೋಟಿಶಃ ಲೋಷ್ಟಭೇದನಃ — ೨ಮಂಣು ಹೆಂಟೆ ಒಡೆಯುವ ಕೊಡತಿ. ಪ್ರಾಜನಂ ತೋದನಂ ತೋತ್ರಂ — ೩ ತಿವಿಗೋಲು, ಮುಳ್ಳುಗೋಲು. ಖನಿತ್ರಂ ಅವದಾರಣಂ — ೨ ಅಗತೆ ಕೈ, ಗುದ್ದಲಿ, ಎಲೆಕೊಟ್ಟು. ದಾತ್ರಂ ಲವಿತ್ರಂ — ೨ ಕುಡುಗೋಲು, ಈಳಿಗೆಮಣೆ, ಮಚ್ಚುಗತ್ತಿ ಇತ್ಯಾದಿ. ಆಬಂಧಃ ಯೋಕ್ತ್ರಂ ಯೋತ್ರಂ — ೩ ಎತ್ತಿನ ಕುತ್ತಿಗೆಗೆ ನೊಗವನ್ನು ಹೇರಿ ಅದನ್ನು ಬಿಗಿದು ಕಟ್ಟುವ ಹಗ್ಗ, ಜತ್ತಿಗೆ. ಫ (ಹ) ಲಂ ನಿರೀಶಂ ಕುಟಕಂ — ೩ ಕಬ್ಬಿಣದ ನೇಗಿಲು. ಸೀಮೆ ನೇಗಿಲು. ಫಾಲಃ ಕೃಷಕಃ — ೨ ಮರದಿಂದಲೂ ಕಬ್ಬಿಣದಿಂದಲೂ ಮಾಡಿದ ನಾಡು ನೇಗಿಲು. ಲಾಂಗಲಂ ಹಲಂ ಗೋದಾರಣಂ ಸೀರಃ — ೪ ಸಾಮಾನ್ಯವಾದ

ಗೋದಾರಣಾ ಚ ಸೀರೋಥ ಶಮ್ಯಾ ಸ್ತ್ರೀ ಯುಗಕೀಲಕಂ ।
ಈಷಾ ಲಾಂಗಲದಂಡಃ ಸ್ಯಾತ್ಸೀತಾ ಲಾಂಗಲಪದ್ಧತಿಃ ॥ ೭೦೨ ॥
ಪುಂಸಿ ಮೇಥಿಃ (ಧಿಃ) ಖಲೇ ದಾರು ನ್ಯಸ್ತಂ ಯತ್ಪಶುಬಂಧನೇ ।
ಆಶುರ್ವ್ರೀಹಿಃ ಪಾಟಲಃ ಸ್ಯಾಚ್ಛಿತಶೂಕಯವೌ ಸಮೌ ॥ ೭೦೩ ॥
ತೋಕ್ಮಸ್ತು ತತ್ರ ಹರಿತೇ ಕಲಾಯಸ್ತು ಸತೀನಕಃ ।
ಹರೇಣುಖಂಡಿಕೌ ಚಾಸ್ಮಿನ್ ಕೋರದೂಷಸ್ತು ಕೋದ್ರವಃ ॥ ೭೦೪ ॥
ಮಂಗಲ್ಯಕೋ ಮಸೂರೋಽಥ ಮಕುಷ್ಠ (ಷ್ಟ) ಕಮಯುಷ್ಠಕೌ ।
ವನಮುದ್ಗೇ ಸರ್ಷಪೇ ತು ದ್ವೌ ತುಂದುಭಕದಂಬಕೌ ॥ ೭೦೫ ॥
ಸಿದ್ಧಾರ್ಥಸ್ತ್ವೇಷಧವಲೋ ಗೋಧೂಮಃ ಸುಮನಃ ಸಮೌ ।
ಸ್ಯಾದ್ಯಾವಕಸ್ತು ಕುಲ್ಮಾಷಶ್ಚಣಕೋ ಹರಿಮಂಥಕಃ ॥ ೭೦೬ ॥
ದ್ವೌ ತಿಲೇ ತಿಲಪೇಜಶ್ಚ ತಿಲಪಿಂಜಶ್ಚ ನಿಷ್ಫಲೇ ।
ಕ್ಷವಃ ಕ್ಷುತಾಭಿಜನನೋ ರಾಜಿಕಾ ಕೃಷ್ಣಿಕಾಸುರೀ ॥ ೭೦೭ ॥

---

ನೇಗಿಲು. ಶಮ್ಯಾ ಯುಗಕೀಲಕಂ — ೨ ನೊಗದ ಗೂಟ, ಕೀಲು. ಈ ಷಾ —೧ ಲಾಂಗಲದಂಡಃ — ನೇಗಿಲ ಬುಡದಿಂದ ಹೊರಟು ನೊಗದ ಮೇಲೆ ಕೂತುಕೊಳ್ಳುವ ಉದ್ದದ ಮರ. ಸೀತಾ — ೧ ಲಾಂಗಲಪದ್ಧತಿಃ — ನೇಗಿಲು ಹರಿದ ಹಳ್ಳವಾದ ಜಾಗ ॥ ೭೦೨ ॥

ಮೇಥಿಃ (ಪು) —೧ ಪಶುಬಂಧನೇ ಖಲೇ ಯತ್ ನ್ಯಸ್ತಂ ದಾರು — ಅಂಗಣದಲ್ಲಿ ಎತ್ತು ಮುಂತಾದವುಗಳನ್ನು ಕಟ್ಟಲು ನೆಟ್ಟಿರುವ ಮರ, ಮೇಟಿಮರ. ಆಶುವ್ರೀಹಿಃ ಪಾಟಲಃ — ೨ ಕೆಂಬೂತಿ ಭತ್ತ, ಶಿತಶೂಕಃ ಯವಃ — ೨ ಬಿಳೀ ಭತ್ತ. ತೋಕ್ಮಃ — ೨ ಹರಿತೇ ತತ್ರ — ಹಳದಿ ಭತ್ತ. ಕಲಾಯಃ ಸತೀನಕಃ ಹರೇಣುಃ ಖಂಡಿಕಃ — ೪ ನೆಲಗಡಲೆ ಕಾಯಿ. ಕೋರದೂಷಃ ಕ್ರೋದವಃ — ೨ ಹಾರಕವೆಂಬ ಧಾನ್ಯ. ಮಂಗಲ್ಯಕಃ ಮಸೂರಃ ೨ ಕಾಡುಗಡಲೆ ಸಣ್ಣಗಡಲೆ. ಮಕುಷ್ಠಕಃ ಮಯುಷ್ಠಕಃ ವನಮುದ್ಗಃ — ೩ ಕಾಡು ಹೆಸರು. ಸರ್ಷಪಃ ತುಂದುಭಃ ಕದಂಬಕಃ — ೩ ಸಾಸಿವೆ. ಸಿದ್ಧಾರ್ಥಃ — ೧ ಏಷ ಧವಲಃ — ಬಿಳೀ ಸಾಸಿವೆ. ಗೋಧೂಮಃ ಸುಮನಃ — ೨ ಗೋಧಿ. ಯಾವಕಃ ಕುಲ್ಮಾಷಃ — ೨ ಅಲಸಂದೆ, ತಡಗುಣಿ. ಚಣಕಃ ಹರಿಮಂಥಕಃ — ೨ ಕಡಲೆ. ತಿಲಪಿಂಜಃ ತಿಲಪೇಜಃ — ೨ ನಿಷ್ಫಲೇ ತಿಲೇ — ಜಳ್ಳು ಎಳ್ಳು. ಕ್ಷವಃ ಕ್ಷುತಾಭಿಜನನಃ ರಾಜಿಕಾ ಕೃಷ್ಣಿಕಾ ಆಸುರೀ — ೬ ಕರೀ ಸಾಸಿವೆ, ದೊಡ್ಡ ಸಾಸಿವೆ. ॥ ೭೦೭ ॥

ಸ್ತ್ರಿಯೌ ಕಂಗುಕ್ಪ್ರಿಯಂಗೂ ದ್ವೇ ಅತಸೀ ಸ್ಯಾ ದುಮಾ ಕ್ಷುಮಾ ।
ಮಾತುಲಾನೀ ತು ಭಂಗಾಯಾಂ ವ್ರೀಹಿಭೇದಸ್ತ್ವಣುಃ ಪುಮಾನ್ ॥ ೭೦೮ ॥
ಕಿಂಶಾರುಃ ಸಸ್ಯಶೂಕಂ ಸ್ಯಾತ್ಕಣಿಶಂ ಸಸ್ಯಮಂಜರೀ ।
ಧಾನ್ಯಂ ವ್ರೀಹಿಃ ಸ್ತಂಭಕರಿಃ ಸ್ತಂಭೋ ಗುಚ್ಛಸ್ತೃಣಾದಿನಃ ॥ ೭೦೯ ॥
ನಾಡೀ ನಾಲಂ ಚ ಕಾಂಡೋಽಸ್ಯ ಪಲಾಲೋಽಸ್ತ್ರೀ ಸ ನಿಷ್ಫಲಃ ।
ಕಡಂಗರೋ ಬುಸಂ ಕ್ಲೀಬೇ ಧಾನ್ಯತ್ವಚಿ ತುಷಾಂಸ್ತುಷಃ ॥ ೭೧೦ ॥
ಶೂಕೋಽಸ್ತ್ರೀ ಶ್ಲಕ್ಷ್ಣತೀಕ್ಷ್ಣಾಗ್ರೇ ಶಮೀ ಶಿಂಬಾ ತ್ರಿಷೂತ್ತರೇ ।
ಋದ್ಧಮಾವಸಿತಂ ಧಾನ್ಯಂ ಪೂತಂ ತು ಬಹುಲೀಕೃತಮ್ ॥ ೭೧೧ ॥
ಮಾಷಾದಯಃ ಶಮೀಧಾನ್ಯೇ ಶೂಕಧಾನ್ಯೇ ಯವಾದಯಃ ।
ಶಾಲಯಃ ಕಲಮಾದ್ಯಾಶ್ಚ ಷಷ್ಟಿಕಾದ್ಯಾಶ್ಚ ಪುಂಸ್ಯಮೀ ॥ ೭೧೨ ॥
ತೃಣಧಾನ್ಯಾನಿ ನೀವಾರಾಃ ಸ್ತ್ರೀ ಗವೇಧುರ್ಗವೇಧುಕಾ ।
ಅಯೋಗ್ರಂ ಮುಸಲೋಽಸ್ತ್ರೀ ಸಾದ್ಯದೂಖಲಮುಲೂಖಲಮ್ ॥ ೭೧೩ ॥

---

ಕಂಗುಃ ಪ್ರಿಯಂಗುಃ (೨ ಸ್ತ್ರೀ) — ನವಣೆಯ ಹೆಸರು. ಅತಸೀ ಉಮಾ ಕ್ಷುಮಾ — ೩ ಕರಿ ಅಗಸೆ. ಮಾತುಲಾನೀ ಭಂಗಾ — ೨ ಸೆಣಬು. ಅಣುಃ — ೧ ಸಣ್ಣ ಭತ್ತ. ಕಿಂಶಾರುಃ ಸಸ್ಯಶೂಕಂ — ೨ ಭತ್ತದ ಊಬು. ಕಣಿಶಂ ಸಸ್ಯಮಂಜರೀ — ೨ ಧಾನ್ಯದ ತೆನೆ. ಧಾನ್ಯಂ ವ್ರೀಹಿಃ ಸ್ತಂಬಕರಿಃ — ೩ ಧಾನ್ಯದ ಹೆಸರು. ಸ್ತಂಭಃ ಗುಚ್ಛಃ — ೨ ಹೊದರಾಗಿರುವ ಹುಲ್ಲು ಪೈರು ಮುಂತಾದವು. ನಾಳೀ ನಾಳಂ ಕಾಂಡಂ — ಪೈರಿನ ದಂಟು, ತಾಳು, ಕಡ್ಡಿ. ಪಲಾಲಃ — ಜಳ್ಳು. ಕಡಂಗರಃ ಬುಸಂ — ೨ ಹೊಟ್ಟು. ಶೂಕಃ — ೧ ಶ್ಲಕ್ಷ್ಣತೀಕ್ಷ್ಣಾಗ್ರೇ — ನುಣುಪಾಗಿಯೂ ಮೊನಚಾಗಿಯೂ ಇರುವ ಧಾನ್ಯದ ಮುಳ್ಳು, ಊಬು. ಶಮೀ ಶಿಂಬಾ — ೨ ಹೊಟ್ಟು, ತವುಡು. ಉತ್ತರೇ ತ್ರಿಷು — ಮುಂದೆ ಹೇಳುವ ಋದ್ಧ ಶಬ್ದದಿಂದ ಬಹುಳೀಕೃತ ಪದದ ವರೆಗೆ ಇರುವವುಗಳು ತ್ರಿಲಿಂಗಗಳು. ಋದ್ಧಂ ಆವಸಿತಂ — ೨ ಕುಟ್ಟಿದ ಧಾನ್ಯ. ಪೂತಂ ಬಹುಳೀಕೃತಂ — ೨ ತೂರಿ ಹದ ಮಾಡಿದ ಧಾನ್ಯ. ಶಮೀಧಾನ್ಯಂ — ೧ ಉದ್ದು ಮೊದಲಾದವುಗಳು. ಶೂಕಧಾನ್ಯಂ — ಗೋದಿ ಮೊದಲಾದವುಗಳು. ಶಾಲಯಃ ಕಲಮಾಃ — ೨ ಭತ್ತ ಮೊದಲಾದವುಗಳು. ಷಷ್ಟಿಕಾಃ — ೨ ತಿಂಗಳಿಗೆ ಬೆಳೆ ಬರುವ ಭತ್ತ ಮೊದಲಾದವುಗಳು. ॥೭೧೨॥

ತೃಣಧಾನ್ಯಂ ನೀವಾರಃ — ೨ ಕಾಡು ಭತ್ತ ಮೊದಲಾದ ತಾನಾಗಿ ಬೆಳೆಯುವ ಧಾನ್ಯಗಳು. ಗವೇಧುಃ ಗವೇಧುಕಾ — ೨ ಕಾಡು ಗೋಧಿ. ಅಯೋಗ್ರಂ ಮುಸಲಃ (ಪುಂ ನ) — ಒನಕೆಯ ಹೆಸರು. ಉದೂಖಲಂ

ಪ್ರಸ್ಫೋಟನಂ ಶೂರ್ಪಮಸ್ತ್ರೀ ಚಾಲನೀ ತಿತಉಃ ಪುಮಾನ್ ।
ಸ್ಯೂತಪ್ರಸೇವೌ ಕಂಡೋಲಪಿಟೌ ಕಟಕಿಲಿಂಜಕೌ ॥ ೭೧೪ ॥
ಸಮಾನೌ ರಸವತ್ಯಾಂ ತು ಪಾಕಸ್ಥಾನ ಮಹಾನಸೇ ।
ಪೌರೋಗವಸ್ತದಧ್ಯಕ್ಷಃ ಸೂಪಕಾರಾಸ್ತು ವಲ್ಲವಾಃ ॥ ೭೧೫ ॥
ಆರಾಲಿಕಾ ಆಂಧಸಿಕಾಃ ಸೂದಾ ಔದನಿಕಾ ಗುಣಾಃ ।
ಆಪೂಪಿಕಃ ಕಾಂದವಿಕೋ ಭಕ್ಷ್ಯಕಾರ ಇಮೇ ತ್ರಿಷು ॥ ೭೧೬ ॥
ಅಶ್ಮಂತಮುದ್ವಾ (ದ್ಧಾ) ನಮಧಿಶ್ರಯಣೀ ಚುಲ್ಲಿರಂತಿಕಾ ।
ಅಂಗಾರಧಾನಿಕಾಂಗಾರ ಶಕಟ್ಯಪಿ ಹಸಂತ್ಯಪಿ ॥ ೭೧೭ ॥
ಹಸನ್ಯಪ್ಯಥನ ಸ್ತ್ರೀ ಸ್ಯಾದಂಗಾರೋಽಲಾತಮುಲ್ಮುಕಮ್ ।
ಕ್ಲೀಬೇಽಂಬರೀಷಂ ಭ್ರಾಷ್ಟ್ರೋ ನಾ ಕಂದುರ್ವಾ ಸ್ವೇದನೀ ಸ್ತ್ರಿಯಾಮ್ ॥ ೭೧೮ ॥
ಆಲಿಂಜರಸ್ಸ್ಯಾನ್ಮಣಿಕಃ ಕರ್ಕರ್ಯಾಲೂ ಗಳಂತಿಕಾ ।
ಪಿಠರಃ ಸ್ಥಾಲ್ಯುಖ್ಯಾ ಕುಂಡಂ ಕಲಶಸ್ತು ತ್ರಿಷು ದ್ವಯೋಃ ॥ ೭೧೯ ॥
ಘಟಃ ಕುಟನಿಪಾವಸ್ತ್ರೀ ಶರಾವೋ ವರ್ಧಮಾನಕಃ ।

---

ಉಲೂಖಲಂ — ೨ ಒರಳು. ಪ್ರಸ್ಫೋಟನಂ ಶೂರ್ಪಂ (ಪುಂ ನ) — ೨ ಮೊರ, ಗೆರಸಿ. ಚಾಲನೀ (ಸ್ತ್ರೀ) ತಿತಉಃ (ಪು) — ವಂದರಿ, ಜರಡಿ. ಸ್ಯೂತಃ ಪ್ರಸೇವಃ — ೨ ಬಿದಿರು ತಟ್ಟೆ, ಮಕ್ಕರಿ ಕಂಡೋಲಃ ಪಿಟಃ — ೨ ಗೂಡೆ, ಹೆಡಿಗೆ. ಕಟಃ ಕಿಲಿಂಜಕಃ — ೨ ಚಾಪೆ. ರಸವತೀ ಪಾಕಸ್ಥಾನಂ ಮಹಾನಸಂ — ೩ ಅಡಿಗೆ ಮನೆ. ಪೌರೋಗವಃ — ೧ ತದಧ್ಯಕ್ಷಃ — ಅಡಿಗೆ ಮನೆ ಯಜಮಾನ. ಸೂಪಕಾರಾಃ ವಲ್ಲವಾಃ ಆರಾಳಿಕಾಃ ಆಂಧಸಿಕಾಃ ಸೂದಾಃ ಔದಾನಿಕಾಃ ಗುಣಾಃ — ೭ ಅಡಿಗೆಯವರು. ಬಾಣಸಿಗ. ಆಪೂಪಿಕಃ ಕಾಂದವಿಕಃ ಭಕ್ಷ್ಯಕಾರಃ — ೩ ಭಕ್ಷ್ಯಮಾಡುವವನು. ಇಮೇ ತ್ರಿಷು — ಇವು ೧೧ ಪದಗಳು ೩ ಲಿಂಗಗಳಲ್ಲಿಯೂ ಇರುತ್ತವೆ. ಅಶ್ಮಂತಂ ಉದ್ಧಾನಂ ಅಧಿಶ್ರಯಣೀ ಚುಲ್ಲಿಃ ಅಂತಿಕಾ — ೫ ಒಲೆ. ಅಂಗಾರಧಾನಿಕಾ ಅಂಗಾರ ಶಕಟೀ ಹಸಂತೀ ಹಸನೀ — ೪ ಅಗ್ಗಿಷ್ಟಿಕೆ. ॥ ೭೧೭ ॥

ಅಂಗಾರಃ ಅಲಾತಂ ಉಲ್ಮುಕಂ — ೩ ಕೊಳ್ಳಿ, ಕೆಂಡ ಅಂಬರೀಷಂ ಭ್ರಾಷ್ಟ್ರಃ — ೨ ಹುರಿಯುವ ಓಡು, ಬಾಣಲೆ. ಕಂದುಃ ಸ್ವೇದನೀ — ೨ ಕಾವಲಿ, ಹೆಂಚು. ಆಲಿಂಜರಃ ಮಣಿಕಃ — ೨ಗುಡಾಣ, ದೊಡ್ಡ ಅಳಗೆ. ಕರ್ಕರೀ ಆಳುಃ ಗಳಂತಿಕಾ — ೩ ಗಡಿಗೆ ಪಿಠರಃ ಸ್ಥಾಲೀ ಉಖಾ ಕುಂಡಂ — ೪ಮಡಿಕೆ, ಕುಡಿಕೆ. ಕಲಶಃ (ತ್ರಿಲಿಂಗ) ಘಟಃ ಕುಟಃ ನಿಪಃ

ಋಜೀಷಂ ಪಿಷ್ಟಪಚನಂ ಕಂಸೋಽಸ್ತ್ರೀ ಪಾನಭಾಜನಮ್ ॥೨೦॥
ಕುತೂಃ ಕೃತ್ತಿಸ್ನೇಹಪಾತ್ರ ಸ್ಯೈವಾಲ್ಪಾ ಕುತುಪಃ ಪುಮಾನ್ ।
ಸರ್ವಮಾವಪನಂ ಭಾಂಡಂ ಪಾತ್ರಾಮತ್ರಂ ಚ ಭಾಜನಂ ॥೨೦॥
ದರ್ವಿಃ ಕಂಬಿಃ ಖಜಾಕಾ ಚ ಸ್ಯಾತ್ತಂಡೂ (ರ್ದೂ) ರ್ದಾರುಹಸ್ತಕಃ ।
ಅಸ್ತ್ರೀ ಶಾಕಂ ಹರಿತಕಂ ಶಿಗ್ರುರಸ್ಯ ತು ನಾಡಿಕಾ ॥೨೨॥
ಕಡಂಬಶ್ಚ ಕಲಂಬಶ್ಚ ವೇಶವಾರ ಉಪಸ್ಕರಃ ।
ತಿಂತಿಡೀಕಂ ಚ ಚುಕ್ರಂ ಚ ವೃಕ್ಷಾಮ್ಲಮಥವೇಲ್ಲಜಮ್ ॥ ೨೩ ॥
ಮರೀಚಂ ಕೋಲಕಂ ಕೃಷ್ಣಮೂಷಣಂ ಧರ್ಮಪತ್ತನಮ್ ।
ಜೀರಕೋ ಜರಣೋಽಜಾಜೀ ಕಣಾ ಕೃಷ್ಣೇ ತು ಜೀರಕೇ ॥೨೪॥
ಸುಷವೀ ಕಾರವೀ ಪೃಥ್ವೀ ಪೃಥುಃ ಕಾಲೋಪಕುಂಚಿಕಾ ।
ಆರ್ದ್ರಕಂ ಶೃಂಗವೇರಂ ಸ್ಯಾದಥ ಛತ್ರಾ ವಿತುನ್ನಕಂ ॥೨೫॥
ಕುಸ್ತುಂಬುರು ಚ ಧಾನ್ಯಾಕಮಥ ಶುಂಠೀ ಮಹೌಷಧಮ್ ।

---

— ೩ ಹರವಿ, ಬಿಂದಿಗೆ, ಕೊಡ. ಶರಾವಃ ವರ್ಧಮಾನಕಃ — ೨ ಮುಚ್ಚಳ. ಋಜೀಶಂ ಪಿಷ್ಟಪಚನಂ — ೩ ಹರಕಲ ಚಟ್ಟಿ, ಗಾರಿಗೆ ಮುಚ್ಚಳ, ಭಾನೆ. ಕಂಸಃ ಪಾನಭಾಜನಂ — ೨ ಪಂಚಪಾತ್ರೆ, ಗಿಂಡಿ, ಹೂಜಿ, ಥಾಲಿ. ಕುತೂಃ (ಊಕಾರಾಂತ ಸ್ತ್ರೀಲಿಂಗ) — ೧ ಕೃತ್ತಿಸ್ನೇಹಪಾತ್ರೇ — ಎಣ್ಣೆ ತುಂಬುವ ಚರ್ಮದ ಬುದ್ದಲಿ. ಕುತುಪಃ — ೧ ಸ್ಯೈವಾಲ್ಪಾ — ಚಿಕ್ಕದಾದ ಚರ್ಮದ ಕೈ ಬುದ್ದಲಿ. ಆವಪನಂ ಭಾಂಡಂ ಪಾತ್ರಂ ಅಮತ್ರಂ ಭಾಜನಂ — ೫ ಪದಾರ್ಥ ತುಂಬುವ ಚೀಲ, ಗುಡಾಣ, ಬುರುಡೆ, ಮಡಿಕೆ ಇತ್ಯಾದಿ. ದರ್ವಿಃ ಕಂಬಿಃ ಖಜಾಕಾ — ೩ ಸೌಟು, ಉದ್ಧರಣೆ. ತಂಡೂಃ — ಪಾ — ತರ್ದೂಃ (ಊ ಸ್ತ್ರೀ) — ದಾರುಹಸ್ತಕಃ — ೨ ಮರದ ಸೌಟು. ಶಾಕಂ ಹರಿತಕಂ ಶಿಗ್ರುಃ — ೩ ಕಾಯಿಪಲ್ಯ, ತರಕಾರಿ. ಕಡಂಬಃ ಕಲಂಬಃ — ೨ ಅಸ್ಯ ನಾಡಿಕಾ —ಸೊಪ್ಪಿನ ದಂಟು. ॥೨೨॥

ವೇಶವಾರಃ ಉಪಸ್ಕರಃ — ೨ ಸಂಬಾರ ಪದಾರ್ಥ, ಮಸಾಲೆ. ತಿಂತ್ರಿಣೀಕಂ ಪಾ — ತಿಂತಿಡೀಕಂ ಚುಕ್ರಂ ವೃಕ್ಷಾಮ್ಲಂ — ೩ ಹುಣಸೇ ಹಣ್ಣು. ವೇಲ್ಲಜಂ ಮರೀಚಂ ಕೋಲಕಂ ಕೃಷ್ಣಂ ಊಷಣಂ ಧರ್ಮಪತ್ತನಂ — ೬ ಮೆಣಸು, ಕರಿಮೆಣಸು. ಜೀರಕಃ ಜರಣಃ ಅಜಾಜೀ ಕಣಾ — ೪ ಜೀರಿಗೆ. ಸುಷವೀ ಕಾರವೀ ಪೃಥ್ವೀ ಪೃಥುಃ ಕಾಲಾ ಉಪಕುಂಚಿಕಾ — ೬ ಕರೀ ಜೀರಿಗೆ. ಆರ್ದ್ರಕಂ ಶೃಂಗವೇರಂ — ೨ ಹಸಿಶುಂಠಿ. ಛತ್ರಾ ವಿತುನ್ನಕಂ ಕುಸ್ತುಂಬುರು (ನ) ಧಾನ್ಯಾಕಂ — ೪ ಕೊತ್ತುಂಬರಿ. ಶುಂಠೀ

ಸ್ತ್ರೀನಪುಂಸಕಯೋರ್ವಿಶ್ವಂ ನಾಗರಂ ವಿಶ್ವಭೇಷಜವತ್ ||೭೨೭||
ಆರನಾಲಕ ಸೌವೀರ ಕುಲ್ಮಾಷಾಭಿಷುತಾನಿ ಚ |
ಅವಂತಿಸೋಮ ಧಾನ್ಯಾಮ್ಲ ಕುಂಜಲಾನಿ ಚ ಕಾಂಜಿಕೇ ||೭೨೭||
ಸಹಸ್ರವೇಧಿ ಜತುಕಂ ಬಾಹ್ಲೀಕಂ ಹಿಂಗು ರಾಮಠಂ |
ತತ್ಪತ್ರೀ ಕಾರವೀ ಪೃಥ್ವೀ ಭಾಷ್ಪಿಕಾ ಕಬರೀ ಪೃಥುಃ ||೭೨೮||
ನಿಶಾಖ್ಯಾ ಕಾಂಚನೀ ಪೀತಾ ಹರಿದ್ರಾ ವರವರ್ಣಿನೀ |
ಸಾಮುದ್ರಂ ಯತ್ತು ಲವಣಮುಕ್ಷೀಬಂ ವಶಿರಂ ಚ ತತ್ ||೭೨೯||
ಸೈಂಧವೋಽಸ್ತ್ರೀ ಶೀತಶಿವಂ ಮಾಣಿಮಂಥಂ ಚ ಸಿಂಧುಜೇ |
ರೌಮಕಂ ವಸುಕಂ ಪಾಕ್ಯಂ ಬಿಡಂ ಚ ಕೃತಕೇ ದ್ವಯಮ್ ||೭೩೦||
ಸೌವರ್ಚಲೇಽಕ್ಷ ರುಚಕೇ ತಿಲಕಂ ತತ್ರ ಮೇಚಕೇ |
ಮತ್ಸ್ಯಂಡೀ ಫಾಣಿತಂ ಖಂಡವಿಕಾರೇ ಶರ್ಕರಾ ಸಿತಾ ||೭೩೧||
ಕೂರ್ಚಿಕಾ ಕ್ಷೀರವಿಕೃತಿಃ ಸ್ಯಾದ್ರಸಾಲಾ ತು ಮಾರ್ಜಿತಾ |
ಸ್ಯಾತ್ತೇಮನಂ ತು ನಿಷ್ಠಾನಂ ತ್ರಿಲಿಂಗಾ ವಾಸಿತಾವಧೇಃ || ೭೩೨ ||

---

ಮಹೌಷಧಂ ವಿಶ್ವಂ (ಸ್ತ್ರೀ ನ) ನಾಗರಂ ವಿಶ್ವಭೇಷಜಂ — ೫ ಒಣ ಶುಂಠಿ. ಆರನಾಳಕಂ ಸೌವೀರಂ ಕುಲ್ಮಾಭಿಷುತಂ ಅವಂತಿಸೋಮಂ ಧಾನ್ಯಾಮ್ಲಂ ಕುಂಜಲಂ ಕಾಂಜಿಕಂ — ೭ ಕಲಗಚ್ಚು, ಗಂಜಿ, ಉಕ್ಕುತಿಳಿ. ||೭೨೭||

ಸಹಸ್ರವೇಧಿ (ನ) ಜತುಕಂ ಬಾಹ್ಲೀಕಂ ಹಿಂಗು ರಾಮಠಂ — ೫ ಇಂಗು. ಕಾರವೀ ಪೃಥ್ವೀ ಬಾಷ್ಪಿಕಾ ಕಬರೀ ಪೃಥುಃ (ಸ್ತ್ರೀ) — ೫ ಇಂಗಿನ ಗಿಡ. ನಿಶಾಖ್ಯಾ ಕಾಂಚನೀ ಪೀತಾ ಹರಿದ್ರಾ ವರವರ್ಣಿನೀ — ೫ ಅರಸಿನ. ಅಕ್ಷೀಬಂ ವಶಿರಂ — ೨ ಸಾಮುದ್ರಂ ಲವಣಂ — ಸಮುದ್ರದ ನೀರಿನಿಂದಾದ ಉಪ್ಪು. ಸೈಂಧವಃ ಶೀತಶಿವಂ ಮಾಣಿಮಂಥಂ — ೩ ಸಿಂಧುಜೇ — ಸೈಂಧವಲವಣ. ರೌಮಕಂ ವಸುಕಂ — ೨ ಚೌಳುಪ್ಪು. ಪಾಕ್ಯಂ ಬಿಡಂ — ೨ ಅಟ್ಟುಪ್ಪು. ಕಾಯಿಸಿ ತೆಗೆದ ಉಪ್ಪು. ಸೌವರ್ಚಲಂ ಅಕ್ಷಂ ರುಚಕಂ — ೩ ಪೆಟ್ಲುಪ್ಪು, ಸೌವರ್ಚಲವಣ. ತಿಲಕಂ— ೧ ತತ್ರ ಮೇಚಕೇ — ಕರಿಸೌವರ್ಚಲವಣ. ಮತ್ಸ್ಯಂಡೀ ಫಾಣಿತಂ — ೨ ಖಂಡವಿಕಾರೇ — ಕಲ್ಲು ಸಕ್ಕರೆ. ಶರ್ಕರಾ ಸಿತಾ —೨ ಪುಡಿ ಸಕ್ಕರೆ. ಕೂರ್ಚಿಕಾ— ೧ ಕ್ಷೀರವಿಕೃತಿಃ — ಒಡೆದ ಹಾಲು. ರಸಾಲಾ ಮಾರ್ಜಿತಾ — ೨ ಕಡೆದ ಮಜ್ಜಿಗೆ, ಸಂಬಾರದ ಮಜ್ಜಿಗೆ. ತೇಮನಂ ನಿಷ್ಠಾನಂ — ೨ ಹಸಿ ಮಜ್ಜಿಗೆ, ಪಳದ್ಯ. ವಾಸಿತಾವಧೇಃ

ಶೂಲಾಕೃತಂ ಭಟಿತ್ರಂ ಚ ಶೂಲ್ಯಮುಖ್ಯಂ ತು ಪೈಠರಮ್ ।
ಪ್ರಣೀತಮುಪಸಂಪನ್ನಂ ಪ್ರಯಸ್ತಂ ಸ್ಯಾತ್ಸು ಸಂಸ್ಕೃತಮ್ ॥ ೭೩೩ ॥
ಸ್ಯಾತ್ಪಿಚ್ಛಿಲಂ ತು ವಿಜಿಲಂ ಸಂಮೃಷ್ಟಂ ಶೋಧಿತಂ ಸಮೇ ।
ಚಿಕ್ಕಣಂ ಮಸೃಣಂ ಸ್ನಿಗ್ಧಂ ತುಲ್ಯೇ ಭಾವಿತವಾಸಿತೇ ॥ ೭೩೪ ॥
ಅಪಕ್ವಂ ಪೌಲಿರಭ್ಯೂಷೋ ಲಾಜಾಃ ಪುಂಭೂಮ್ನಿ ಚಾಕ್ಷತಾಃ ।
ಪೃಥುಕಸ್ಸ್ಯಾಚ್ಚಿಪಿಟಕೋ ಧಾನಾ ಭೃಷ್ಟಯವೇ ಸ್ತ್ರಿಯಃ ॥ ೭೩೫ ॥
ಪೂಪೋಽಪೂಪಃ ಪಿಷ್ಟಕಃ ಸ್ಯಾತ್ಕರಂಭಾ ದಧಿಸಕ್ತವಃ ।
ಭಿಸ್ಸಾ ಸ್ತ್ರೀ ಭಕ್ತಮಂಧೋನ್ನ ಮೋದನೋಽಸ್ತ್ರೀ ಸ ದೀದಿವಿಃ ॥ ೭೩೬ ॥
ಭಿಸ್ಸಟಾ ದಗ್ಧಿಕಾ ಸರ್ವರಸಾಗ್ರೇ ಮಂಡಮಸ್ತ್ರಿಯಾಮ್ ।
ಮಾಸರಾಚಾಮನಿಸ್ರಾವಾ ಮಂಡೇ ಭಕ್ತಸಮುದ್ಭವೇ ।

---

ತ್ರಿಲಿಂಗಾಃ — ಇಲ್ಲಿಂದ ವಾಸಿತ ಶಬ್ದದವರೆಗೂ ಇರುವ ಶಬ್ದಗಳು ತ್ರಿಲಿಂಗಗಳು. ॥ ೭೨೨ ॥

ಶೂಲಾಕೃತಂ ಭಟಿತ್ರಂ ಶೂಲ್ಯಂ — ೩ ಕೆಂಡದಲ್ಲಿ ಸುಟ್ಟ ಮಾಂಸ ಉಖ್ಯಂ ಪೈಠರಂ — ೨ ಮಡಿಕೆಯಲ್ಲಿ ಮಾಡಿದ ಹಿಟ್ಟು, ಅನ್ನ ಮೊದಲಾದವುಗಳು. ಪ್ರಣೀತಂ ಉಪಸಂಪನ್ನಂ — ೨ ಶಾಕಪಾಕಾದಿಗಳಿಂದ ರುಚಿಯಾಗಿ ಮಾಡಿದ ಅಡಿಗೆ. ಪ್ರಯಸ್ತಂ — ೧ ಸುಸಂಸ್ಕೃತಮ್ — ಒಳ್ಳೆ ಸಾಮಗ್ರಿಗಳಿಂದ ಚೆನ್ನಾಗಿ ವಾಸನೆ ಕಟ್ಟಿದ ಅಡಿಗೆ. ಪಿಚ್ಛಿಲಂ ವಿಜಿಲಂ — ೨ ಜಿಡ್ಡಾದ ಪದಾರ್ಥ. ಸಂಮೃಷ್ಟಂ ಶೋಧಿತಂ — ೨ ಕಸ, ಕಲ್ಲು ಮುಂತಾದವುಗಳು ಇಲ್ಲದಂತೆ ಜಾಲಿಸಿ ಶೋಧಿಸಿದ ವಸ್ತು. ಚಿಕ್ಕಣಂ ಮಸೃಣಂ ಸ್ನಿಗ್ಧಂ — ೩ ಜಿಡ್ಡಾಗಿ ಒಂದಕ್ಕೊಂದು ಬೆರತಂತೆ ಮಾಡಿದ ಅಡಿಗೆ, ಉದುರಾದ ಅನ್ನ. ಭಾವಿತು ವಾಸಿತಂ — ೨ ಕಲಸನ್ನ, ವಾಸನೆ ಕಟ್ಟಿದ ಅನ್ನ. ಅಪಕ್ವಂ ಪೌಳಿಃ ಅಭ್ಯೂಷಃ — ೩ ಉಸಳಿ, ಗುಗ್ಗರಿ. ಲಾಜಾಃ (ಪುಲ್ಲಿಂಗ ನಿತ್ಯ ಬಹುವಚನಾಂತ) — ೧ ಅರಳು ಅಕ್ಷತಾಃ (ಪು ನಿ ಬ) — ಮಂತ್ರಾಕ್ಷತೆ, ಪೃಥುಕಃ ಚಿಪಿಟಕಃ — ೨ ಅವಲಕ್ಕಿ. ಧಾನಾಃ (ಸ್ತ್ರೀ ಬ) — ೧ ಭೃಷ್ಟಯವೇ — ಅವಲಕ್ಕಿಯನ್ನು ಹುರಿದು ಮಾಡಿದ ಪುರಿ. ಪೂಪಃ ಅಪೂಪಃ ಪಿಷ್ಟಕಃ — ೩ ಕಡಬು, ದೋಸೆ, ಒಬ್ಬಟ್ಟು ಮುಂತಾದವುಗಳು. ಕರಂಭಾಃ ದಧಿಸಕ್ತವಃ (ಪು) — ಮೊಸರು ಕಲಸಿದ ಹುರಿಹಿಟ್ಟು. ಭಿಸ್ಸಾ ಭಕ್ತಂ ಅಂಧಃ (ಸಾಂತ ನ) ಅನ್ನಂ ಓದನಃ (ಪುಂ ನ) ದೀಧಿವಿಃ — ೬ ಅನ್ನ. ಭಿಸ್ಸಟಾ ದಗ್ಧಿಕಾ — ೨ ಸೀದುಹೋದ ಅನ್ನ. ಮಂಡಂ — (ಪುಂ ನ) — ೧ ಸರ್ವರಸಾಗ್ರೇ — ಬಸಿದ ನೀರು, ರಸದ ತಿಳಿ, ಹಾಲಿನ ಕೆನೆ. ಮಾಸರಃ ಆಚಾಮಃ ನಿಸ್ರಾವಃ — ೩ ಭಕ್ತಸಮುದ್ಭವೇ ಮಂಡೇ — ಅನ

ಯವಾಗೂರುಷ್ಣಿಕಾ ಶ್ರಾಣಾ ವಿಲೇಪೀ ತರಲಾ ಚ ಸಾ ।
ಗವ್ಯಂ ತ್ರಿಷು ಗವಾಂ ಸರ್ವಂ ಗೋವಿಡ್ ಗೋಮಯಮಸ್ತ್ರಿಯಾಮ್ ॥ ೭೩೮ ॥
ತತ್ತು ಶುಷ್ಕಂ ಕರೀಷೋಽಸ್ತ್ರೀ ದುಗ್ಧಂ ಕ್ಷೀರಂ ಪಯಃ ಸಮಂ ।
ಪಯಸ್ಯಮಾಜ್ಯದಧ್ಯಾದಿ ದ್ರಪ್ಸಂ ದಧಿ ಘನೇತರತ್ ॥ ೭೩೯ ॥
ಘೃತಮಾಜ್ಯಂ ಹವಿಃ ಸರ್ಪಿರ್ನವನೀತಂ ನವೋದ್ಧೃತಮ್ ।
ತತ್ತು ಹೈಯಂಗವೀನಂ ಯತ್ ಹ್ಯೋಗೋದೋಹೋದ್ಭವಂ ಘೃತಮ್ ॥ ೭೪೦ ॥
ದಂಡಾಹತಂ ಕಾಲಶೇಯಮರಿಷ್ಟಮಪಿ ಗೋರಸಃ ।
ತಕ್ರಂ ಹ್ಯುದಶ್ವಿನ್ಮಥಿತಂ ಪಾದಾಂಬ್ವರ್ಧಾಂಬು ನಿರ್ಜಲಂ ॥ ೭೪೧ ॥
ಮಂಡಂ ದಧಿಭವಂ ಮಸ್ತು ಪೀಯೂಷೋಽಭಿನವಂ ಪಯಃ ।
ಅಶನಾಯಾ ಬುಭುಕ್ಷಾ ಕ್ಷುದ್ ಗ್ರಾಸಸ್ತು ಕವಲಃ ಪುಮಾನ್ ॥ ೭೪೨ ॥

---

ಬಸಿದ ಗಂಜಿ. ॥ ೭೩೭ ॥

ಯವಾಗೂಃ (ಸ್ತ್ರೀ) ಉಷ್ಣಿಕಾ ಶ್ರಾಣಾ ವಿಲೇಪೀ ತರಳಾ — ೫ ರನೇ ಗಂಜಿ, ಅಂಬಲಿ. ಗವ್ಯಂ (ತ್ರಿಲಿಂಗ) — ಗವಾಂ ಸರ್ವಂ — ಹಸುವಿನ ಸಂಬಂಧವಾದ ಎಲ್ಲಾ ಹಾಲು ಮುಂತಾದವುಗಳು. ಗೋವಿಟ್ (ಶಾಂತ ಸ್ತ್ರೀ) ಗೋಮಯಂ (ಪುಂ ನ) — ೨ ಸಗಣಿ. ಕರೀಷಃ — ೧ ಶುಷ್ಕಂ ತತ್— ಒಣಗಿದ ಸಗಣಿ, ಬೆರಣಿ. ದುಗ್ಧಂ ಕ್ಷೀರಂ ಪಯಃ (ಸಾಂತ ನ) — ೩ ಹಾಲು ಪಯಸ್ಯಂ — ೧ ಆಜ್ಯದಧ್ಯಾದಿ — ಹಸುವಿನ ಮೊಸರು, ತುಪ್ಪ. ದ್ರಪ್ಸಂ — ದಧಿಘನೇತರತ್ — ಗಟ್ಟಿಯಾಗದಿರುವ ಮೊಸರಿನ ಅಡಿಭಾಗ. ಮಧ್ಯಭಾಗಕ್ಕೆ ಘನವೆಂದೂ, ಮೇಲ್ಭಾಗಕ್ಕೆ ಶರವೆಂದೂ ಹೆಸರು. ಘೃತಂ ಆಜ್ಯಂ ಹವಿಃ ಸರ್ಪಿಃ (೨ ಸಾಂತ ನ) — ೪ ತುಪ್ಪ. ನವನೀತಂ ನವೋದ್ಧೃತಂ — ೨ ಆಗತಾನೇ ತೆಗೆದ ಬೆಣ್ಣೆ. ಹೈಯಂಗವೀನಂ — ೧ ಯತ್ ಹ್ಯಃ ಗೋದೋಹೋದ್ಭವಂ ಘೃತಂ — ನಿನ್ನೆ ಕರೆದು ಹೆಪ್ಪು ಹಾಕಿ ಇಂದು ಕಡೆದು ಬಂದ ಬೆಣ್ಣೆಯಿಂದ ಆದ ತುಪ್ಪ. ದಂಡಾಹತಂ ಕಾಲಶೇಯಂ ಅರಿಷ್ಟಂ ಗೋರಸಃ — ೪ ಮಜ್ಜಿಗೆ. ತಕ್ರಂ — ೧ ಪಾದಾಂಬು — ನಾಲ್ಕನೇ ಒಂದು ಭಾಗ ನೀರು ಬೆರಸಿದ ಮಜ್ಜಿಗೆ. ಉದಶ್ವಿತ್ (ತಾಂತ ನ) —ಅರ್ಧಾಂಬು — ಅರ್ಧಭಾಗ ನೀರು ಬೆರಸಿದ ಮಜ್ಜಿಗೆ. ಮಥಿತಂ —೧ ನಿರ್ಜಲಂ — ನೀರು ಬೆರಸದ ಮಜ್ಜಿಗೆ. ಮಸ್ತು (ಉ ನ) — ದಧಿಭವಂ ಮಂಡಂ ಮೊಸರಿನ ಕೆನೆ, ಕೆನೆ ಮೊಸರು. ಪೀಯೂಷಃ — ೧ ಅಭಿನವಂ ಪಯಃ — ಈದ ಹಸುವಿನ ಗಿಣ್ಣು ಹಾಲು. ಕರುಹಾಕಿ ೭ ದಿನದ ವರೆಗಿನ ಹಾಲು. ಅಶನಾಯಾ ಬುಭುಕ್ಷಾ ಕ್ಷುತ್ (ಧಾಂತ ಸ್ತ್ರೀ) — ಹಸಿವು. ಗ್ರಾಸಃ ಕಬಳಃ — ೨ ತುತ್ತು, ಕವಳ. ॥೭೪೨॥

ಸಪೀತಿಃ ಸ್ತ್ರೀ ತುಲ್ಯಪಾನಂ ಸಗ್ಧಿಃ ಸ್ತ್ರೀ ಸಹಭೋಜನಮ್ ।
ಉದನ್ಯಾ ತು ಪಿಪಾಸಾ ತೃಟ್ತರ್ಷೋ ಜಗ್ಧಿಸ್ತು ಭೋಜನಮ್ ॥ ೨೪೩ ॥
ಜೇಮನಂ ಲೇಹ ಆಹಾರೋ ನಿಘಸೋ ನ್ಯಾದ ಇತ್ಯಪಿ ।
ಸೌಹಿತ್ಯಂ ತರ್ಪಣಂ ತೃಪ್ತಿಃ ಫೇಲಾ ಭುಕ್ತಸಮುಜ್ಝಿತಮ್ ॥ ೨೪೪ ॥
ಕಾಮಂ ಪ್ರಕಾಮಂ ಪರ್ಯಾಪ್ತಂ ನಿಕಾಮೇಷ್ಟಂ ಯಥೇಪ್ಸಿತಮ್ ।
ಗೋಪೇ ಗೋಪಾಲ ಗೋಸಂಖ್ಯ ಗೋಧುಗಾಭೀರವಲ್ಲವಾಃ ॥ ೨೪೫ ॥
ಗೋಮಹಿಷ್ಯಾದಿಕಂ ಪಾದಬಂಧನಂ ದ್ವೌ ಗವೀಶ್ವರೇ ।
ಗೋಮಾನ್ಗೋಮೀ ಗೋಕುಲಂ ತು ಗೋಧನಂ ಸ್ಯಾತ್ ಗವಾಂ ವ್ರಜೇ ॥ ೨೪೬ ॥
ತ್ರಿಷ್ವಾಶಿತಂ ಗವೀನಂ ತದ್ ಗಾವೋ ಯತ್ರಾಶಿತಾಃ ಪುರಾ ।
ಉಕ್ಷಾ ಭದ್ರೋ ಬಲೀವರ್ದ ಋಷಭೋ ವೃಷಭೋ ವೃಷಃ ॥ ೨೪೭ ॥
ಅನಡ್ವಾನ್ಸೌರಭೇಯೋ ಗೌರುಕ್ಷ್ಣಾಂ ಸಂಹತಿರೌಕ್ಷಕಮ್ ।
ಗವ್ಯಾ ಗೋತ್ರಾ ಗವಾಂ ವತ್ಸಧೇನ್ವೋರ್ವಾತ್ಸಕ ಧೈನುಕೇ ॥ ೨೪೮ ॥

---

ಸಪೀತಿಃ (ಸ್ತ್ರೀ) — ೧ ತುಲ್ಯಪಾನಂ — ಒಟ್ಟಿಗೆ ಕೂತು ಪಾನ ಮಾಡುವುದು. ಸಗ್ಧಿಃ (ಸ್ತ್ರೀ) — ೧ ಸಹಭೋಜನಂ — ಒಟ್ಟಿಗೆ ಕೂತು ಊಟ ಮಾಡುವುದು. ಇವೆರಡಕ್ಕೂ ಸಹಪಂಕ್ತಿ ಭೋಜನವೆಂದು ಹೆಸರು. ಉದನ್ಯಾ ಪಿಪಾಸಾ ತೃಟ್ (ಷಾಂತ ಸ್ತ್ರೀ) ತರ್ಷಃ — ೪ ಬಾಯಾರಿಕೆ. ಜಗ್ಧಿಃ ಭೋಜನಂ ಜೇಮನಂ ಲೇಹಃ ಆಹಾರಃ ನಿಘಸಃ ನ್ಯಾದಃ — ೭ ಊಟ, ಆಹಾರ ತೆಗೆದುಕೊಳ್ಳುವುದು. ಸೌಹಿತ್ಯಂ ತರ್ಪಣಂ ತೃಪ್ತಿಃ — ೩ ತೃಪ್ತಿ, ತಣಿವು. ಫೇಲಾ — ೧ ಭುಕ್ತ ಸಮುಜ್ಝಿತಂ — ಊಟ ಮಾಡಿ ಉಳಿದದ್ದು, ಎಂಜಲು. ಕಾಮಂ ಪ್ರಕಾಮಂ ಪರ್ಯಾಪ್ತಂ ನಿಕಾಮಂ ಇಷ್ಟಂ ಯಥೇಪ್ಸಿತಂ — ೬ ಬೇಕಾದಷ್ಟು; ಯಥೇಚ್ಛ, ಹೆಚ್ಚಾಗಿ. ಗೋಪಃ ಗೋಪಾಲಃ ಗೋಸಂಖ್ಯಃ ಗೋಧುಕ್ ಆಭೀರಃ ವಲ್ಲವಃ — ೬ ಗೊಲ್ಲ, ಪಶುಪಾಲಕ. ಪಾದಬಂಧನಂ — ೧ ಗೋಮಹಿಷ್ಯಾದಿಕಂ — ಎಮ್ಮೆ, ದನ ಮೊದಲಾದವುಗಳು. ಗೋಮಾನ್ (ತಾಂತ) ಗೋಮೀ (ನಾಂತ) — ೨ ದ್ವೌ ಗವೀಶ್ವರೌ — ಹಸುಗಳ ಯಜಮಾನ. ಗೋಕುಲಂ ಗೋಧನಂ — ೨ ಗವಾಂ ವ್ರಜೇ — ಹಸುಗಳ ಮಂದೆ. ಆಶಿತಂ ಗವೀನಂ — ೨ ಯತ್ರ ಗಾವಃ ಪುರಾ ಆಶಿತಾಃ — ಹಿಂದೆ ದನಗಳನ್ನು ಕಟ್ಟುತ್ತಿದ್ದ ಸ್ಥಳ, ಹಿಂದೆ ಮೇಯುತ್ತಿದ್ದ ಸ್ಥಳ. ಉಕ್ಷಾ (ನಾಂತ) ಭದ್ರಃ ಬಲೀವರ್ದಃ ಋಷಭಃ ವೃಷಭಃ ವೃಷಃ ಅನಡ್ವಾನ್ (ಹಾಂತ) ಸೌರಭೇಯಃ ಗೌಃ — ೯ ಎತ್ತು, ಹೋರಿ. ಔಕ್ಷಕಂ — ೧ ಉಕ್ಷ್ಣಾಂ ಸಂಹತಿಃ — ಎತ್ತಿನ ಗುಂಪು. ಗವ್ಯಾ ಗೋತ್ರಾ — ೨ ಹಸುಗಳ ಮಂದೆ, ಗುಂಪು. ವಾತ್ಸಕಂ — ೧ ಕರುಗಳ ಗುಂಪು.

ವೃಷೋ (ಉಕ್ಷಾ) ಮಹಾನ್ಮಹೋಕ್ಷಃ ಸ್ಯಾದ್ವೃದ್ಧೋಕ್ಷಸ್ತು ಜರದ್ಗವಃ ।
ಉತ್ಪನ್ನ ಉಕ್ಷಾ ಜಾತೋಕ್ಷಃ ಸದ್ಯೋಜಾತಸ್ತು ತರ್ಣಕಃ ॥ ೭೪ ॥
ಶಕೃತ್ಕರಿಸ್ತು ವತ್ಸಃ ಸ್ಯಾದ್ದಮ್ಯವತ್ಸತರೌ ಸಮೌ ।
ಆರ್ಷಭ್ಯಷ್ಷಂಡತಾಯೋಗ್ಯಷ್ಷಂಡೋ ಗೋಪತಿರಿಟ್ಚರಃ ॥ ೭೫೦ ॥
ಸ್ಕಂಧಪ್ರದೇಶೋಽಸ್ಯ ವಹಸ್ಸಾಸ್ನಾ ತು ಗಳಕಂಬಳಃ ।
ಸ್ಯಾನ್ನಸ್ತಿತಸ್ತು ನಸ್ಯೋತಃ ಪ್ರಷ್ಠವಾಡ್ಯುಗಪಾರ್ಶ್ವಗಃ ॥ ೭೫೧ ॥
ಯುಗಾದೀನಾಂ ತು ವೋಢಾರೋ ಯುಗ್ಯ ಪ್ರಾಸಂಗ್ಯ ಶಾಕಟಾಃ ।
ಖನತ್ಯನೇನ ತದ್ವೋಢಾಸ್ಯೇದಂ ಹಾಲಿಕಸ್ಸೈರಿಕೌ ॥ ೭೫೨ ॥
ಧೂರ್ವಹೇ ಧುರ್ಯ ಧೌರೇಯ ಧುರೀಣಾಸ್ಸ ಧುರಂಧರಾಃ ।
ಉಭಾವೇಕ ಧುರೀಣೈಕ ಧುರಾವೇಕ ಧುರಾವಹೇ ॥ ೭೫೩ ॥
ಸ ತು ಸರ್ವಧುರೀಣೋ ಯೋ ಭದ್ರಸ್ಸರ್ವಧುರಾವಹಃ ।

---

ಧೇನುಕಂ — ೧ ಈದ ಹಸುಗಳ ಮಂದೆ. ಮಹೋಕ್ಷಃ —೧ ಮಹಾನ್‌ವೃಷಃ — ದೊಡ್ಡ ಎತ್ತು. ಜರದ್ಗವಃ — ೧ ವೃದ್ಧೋಕ್ಷಃ — ಮುದಿ ಎತ್ತು. ಜಾತೋಕ್ಷಃ ೧— ಉತ್ಪನ್ನ ಉಕ್ಷಾ — ಪ್ರಾಯದ ಹೋರಿ, ಹೊರೆ ಹೊರುವ ಎತ್ತು. ತರ್ಣಕಃ — ಸದ್ಯೋಜಾತಃ —ಆಗತಾನೇ ಹುಟ್ಟಿದ ಕರು. ॥ ೧೪೯ ॥ ಶಕೃತ್ಕರಿಃ ವತ್ಸಃ — ೨ ಒಂದು ವರ್ಷದ ಒಳಗಿನ ಕರು. ದಮ್ಯಃ ವತ್ಸತರಃ — ಪಳಗಿದ ಎತ್ತು. ಆರ್ಷಭ್ಯಃ — ೧ ಷಂಡತಾಯೋಗ್ಯಃ — ಬಸವನಾಗಿ ಬಿಡುವ ಹೋರಿ ಷಂಡಃ ಗೋಪತಿಃ ಇಟ್ಚರಃ — ೩ ಬಸವನಾಗಿ ಬಿಟ್ಟ ಹೋರಿ, ಗೂಳಿ. ವಹಃ —೧ ಅಸ್ಯ ಸ್ಕಂಧಪ್ರದೇಶಃ — ಎತ್ತಿನ ಹೆಗಲು. ಸಾಸ್ನಾ ಗಳಕಂಬಳಃ — ೨ ಗಂಗೇ ತೊಗಲು. ನಸ್ತಿತಃ ನಸ್ಯೋತಃ — ೨ ಮೂಗು ದಾರ ಹಾಕಿದ ಎತ್ತು. ಪ್ರಷ್ಠವಾಟ್ (ಹಾಂತ) ಯುಗಪಾರ್ಶ್ವಗಃ —೨ ತಿದ್ದುವು ದಕ್ಕಾಗಿ ಉಳುವ ಎತ್ತಿನ ಪಕ್ಕದಲ್ಲಿ ನಡೆಸುವ ಎತ್ತು, ತಿದ್ದುವ ಎತ್ತು. ಯುಗ್ಯಃ — ೧ ಯುಗಾದೀನಾಂ ವೋಢಾರಃ — ನೊಗವನ್ನು ಹೊರುವ ಎತ್ತು. ಪ್ರಾಸಂಗ್ಯಃ —೧ ಉಳುವ ಎತ್ತಿನ ಬಳಿಯಲ್ಲಿ ಅಭ್ಯಾಸಕ್ಕೋಸ್ಕರ ಸುಮ್ಮನೆ ಕಟ್ಟಿದ ಎತ್ತು. ಶಾಕಟಃ — ೧ ಬಂಡಿ ಎಳೆಯುವ ಎತ್ತು. ಹಾಲಿಕಃ ಸೈರಿಕಃ — ೨ ಅನೇನ ಖನತಿ ತದ್ವೋಢಾ ಅಸ್ಯ ಇದಂ — ನೇಗಿಲಿನಿಂದ ಉಳುವವನು, ನೇಗಿಲು ಹೊರುವವನು, ನೇಗಿಲ ಸಂಬಂಧವಾದುದು. ಧೂರ್ವಹಃ ಧುರ್ಯಃ ಧೌರೇಯಃ ಧುರೀಣಃ ಧುರಂಧರಃ — ೫ ಭಾರ ಹೊರುವ ಎತ್ತು. ಏಕಧುರೀಣಃ ಏಕಧುರಃ ಏಕಧುರಾವಹಃ — ೩ ಹೇರುಗಾಡಿ, ನೇಗಿಲುಗಳಲ್ಲಿ ಯಾವುದಾದರೂ ಒಂದನ್ನು ಹೊರುವ ಅಭ್ಯಾಸವುಳ್ಳ ಎತ್ತು. ಸರ್ವಧುರೀಣಃ ೧ ಯಃ ಭದ್ರಃ ಸರ್ವ

ಮಾಹೇಯೀ ಸೌರಭೇಯೀ ಗೌರುಸ್ರಾ ಮಾಹಾ ಚ ಶೃಂಗಿಣೀ ||೭೫೪||
ಅರ್ಜುನ್ಯಘ್ನ್ಯಾ ರೋಹಿಣೀ ಸ್ಯಾದುತ್ತಮಾ ಗೋಷು ನೈಚಿಕೀ |
ವರ್ಣಾದಿಭೇದಾ ತತ್ಸಂಜ್ಞಾಸ್ಸ್ಯುಶ್ಶಬಳೀ ಧವಳಾದಯಃ ||೭೫೫||
ದ್ವಿಹಾಯನೀ ದ್ವಿವರ್ಷಾ ಗೌರೇಕಾಬ್ದಾತ್ವೇಕಹಾಯನೀ |
ವಶಾ ವಂಧ್ಯಾಽಪತೋಕಾ ತು ಪ್ರವದ್ಗರ್ಭಾಽಥ ಸಂಧಿನೀ || ೭೫೬ ||
ಆಕ್ರಾಂತಾ ವೃಷಭೇಣಾಥ ವೇಹದ್ಗರ್ಭೋಪಘಾತಿನೀ |
ಕಾಲ್ಯೋಪಸರ್ಯಾ ಪ್ರಜನೇ ಪ್ರಷ್ಠೌಹೀ ಬಾಲಗರ್ಭಿಣೀ ||೭೫೭||
ಸ್ಯಾದಚಂಡೀ ತು ಸುಕರಾ ಬಹುಸೂತಿಃ ಪರೇಷ್ಟುಕಾ |
ಚಿರಸೂತಾ ಬಷ್ಕಯಣೀ ಧೇನುಸ್ಸ್ಯಾನ್ನವಸೂತಿಕಾ ||೭೫೮||
ಸುವ್ರತಾ ಸುಖಸಂದೋಹ್ಯಾ ಪೀನೋಧ್ನೀ ಪೀವರಸ್ತನೀ |

---

ಧುರಾವಹಃ — ಎಲ್ಲಾ ವಿಧವಾದ ಭಾರವನ್ನು ಹೊರುವ ಎತ್ತು. ಮಾಹೇಯೀ ಸೌರಭೇಯೀ ಗೌಃ ಉಸ್ರಾ ಮಾಹಾ ಶೃಂಗಿಣೀ ಅರ್ಜುನೀ ಅಘ್ನ್ಯಾ ರೋಹಿಣೀ — ೯ ಹಾಲು ಕರೆಯುವ ಹಸು. ನೈಚಿಕೀ — ೧ ಗೋಷು ಉತ್ತಮಾ — ಉತ್ತಮವಾದ ಹಸು. ಶಬಳೀ — ನಾನಾ ಬಣ್ಣವುಳ್ಳ ಹಸು. ಧವಳಾ — ಬಿಳಿ ಹಸು. ವರ್ಣಾದಿಭೇದಾತ್ತತ್ಸಂಜ್ಞಾಃ ಸ್ಯುಃ — ಹೀಗೆಯೇ ಬೇರೆಬೇರೆ ಬಣ್ಣ ಮುಂತಾದವುಗಳಿಂದ ಆಯಾಯ ಹೆಸರನ್ನು ಹೊಂದುತ್ತವೆ. ಉದಾ: — ವಕ್ರ ಶೃಂಗಾ — ಬಾಗಿದ ಕೊಂಬುಳ್ಳ ಹಸು. ದ್ವಿಹಾಯನೀ — ದ್ವಿವರ್ಷಾ ಗೌಃ — ಎರಡು ವರ್ಷದ ಹಸು. ಏಕಹಾಯನೀ — ಏಕಾಬ್ದಾ — ೧ ವರ್ಷದ ಹಸು. ಹೀಗೆಯೇ ತ್ರಿಹಾಯನೀ ಇತ್ಯಾದಿ ತಿಳಿಯಬೇಕು. ವಶಾ ವಂಧ್ಯಾ — ೨ ಗೊಡ್ಡು ಹಸು, ಬಂಜೆ ಹಸು. ಅಪತೋಕಾ ಪ್ರವದ್ಗರ್ಭಾ — ೨ ಗರ್ಭ ಇಳಿದು ಹೋದ ಹಸು, ಕಂದು ಹಾಕಿದ ಹಸು. ಸಂಧಿನೀ — ವೃಷೇಣ ಆಕ್ರಾಂತಾ — ಗೂಳಿ ಕೂಡಿಸಿದ ಹಸು, ಹೋರಿ ಹಾರಿದ್ದು, ವೇಹತ್ (ಶಾಂತ ಸ್ತ್ರೀ) ಗರ್ಭೋಪಘಾತಿನೀ — ೨ ಸತ್ತ ಕರುವನ್ನು ಹಾಕಿದ ಹಸು. ಕಾಲ್ಯಾ ಉಪಸರ್ಯಾ — ೨ ಪ್ರಜನೇ — ಮೊದಲು ಸಲ ಬೆದೆ ಬಂದ ಹಸು. ಪ್ರಷ್ಠೌಹೀ ಬಾಲಗರ್ಭಿಣೀ — ೨ ಚಿಕ್ಕತನದಲ್ಲಿ ಗಬ್ಬವಾದ ಹಸು. ||೭೫೭||

ಅಚಂಡೀ ಸುಕರಾ — ೨ ಸಾಧುವಾದ ಹಸು. ಬಹುಸೂತಿಃ ಪರೇಷ್ಟುಕಾ — ೨ ಬಹು ಕರುಗಳನ್ನು ಹಾಕಿದ ಹಸು. ಚಿರಸೂತಾ ಬಷ್ಕಯಣೀ — ೨ ಬಹಳ ದಿನವಾದ ಮೇಲೆ ಗಬ್ಬವಾದ ಹಸು. ಧೇನುಃ ನವಸೂತಿಕಾ — ೨ ಈದ ಹಸು. ಸುವ್ರತಾ ಸುಖಸಂದೋಹ್ಯಾ — ೨ ತಂಟೆ ಮಾಡದೆ ಸುಖವಾಗಿ ಹಾಲು ಕರೆಯುವ ಹಸು. ಪೀನೋಧ್ನೀ ಪೀವರಸ್ತನೀ — ೨ ದೊಡ್ಡ ಕೆಚ್ಚಲುಳ್ಳ

ದ್ರೋಣಕ್ಷೀರಾ ದ್ರೋಣದುಘಾ ಧೇನುಷ್ಯಾ ಬಂಧಕೇ ಸ್ಥಿತಾ ॥ ೭೫ ॥
ಸಮಾಂಸಮೀನಾ ಸಾಯ್ಕೈವ ಪ್ರತಿವರ್ಷಂ ಪ್ರಸೂಯತೇ ।
ಊಧಸ್ತು ಕ್ಲೀಬಮಾಪೀನಂ ಸಮೌ ಶಿವಕಕೀಲಕೌ ॥೭೬॥
ನ ಪುಂಸಿ ದಾಮ ಸಂದಾನಂ ಪಶುರಜ್ಜುಸ್ತು ದಾಮನೀ ।
ವೈಶಾಖಮಂಥ ಮಂಥಾನ ಮಂಥಾನೋ ಮಂಥದಂಡಕೇ ॥೭೭॥
ಕುಟರೋ ದಂಡ ವಿಷ್ಕಂಭೋ ಮಂಥನೀ ಗರ್ಗರೀ ಸಮೇ ।
ಉಷ್ಟ್ರೇ ಕ್ರಮೇಳಕಮಯ ಮಹಾಂಗಾಃ ಕರಭಃ ಶಿಶುಃ ॥ ೭೮ ॥
ಕರಭಾಸ್ಸ್ಯುಶ್ಶೃಂಖಲಕಾ ದಾರವೈಃ ಪಾದಬಂಧನೈಃ ।
ಅಜಾ ಛಾಗೀ ಶುಭ (ತುಭ) ಚ್ಛಾಗ ಬಸ್ತಚ್ಛಗಲಕಾ ಅಜೇ ॥೭೯॥
ಮೇಢ್ರೋರಭ್ರೋರಣೋರ್ಣಾಯು ಮೇಷ ವೃಷ್ಣಯ ಏಡಕೇ ।
ಉಷ್ಟ್ರೋರಭ್ರಾಜವೃಂದೇ ಸ್ಯಾದೌಷ್ಟ್ರಕೌರಭ್ರಕಾಜಕಮ್ ॥೮೦॥
ಚಕ್ರೀವಂತಸ್ತು ಬಾಲೇಯಾ ರಾಸಭಾ ಗರ್ದಭಾಃ ಖರಾಃ ।

---

ಹಸು ದ್ರೋಣಕ್ಷೀರಾ ದ್ರೋಣದುಘಾ — ೨ ಹೆಚ್ಚು ಹಾಲು ಕರೆಯುವ ಹಸು ಧೇನುಷ್ಯಾ — ೧ ಬಂಧಕೇ ಸ್ಥಿತಾ — ಸೆರೆಸಿಕ್ಕಿದ ಅಥವಾ ಅಡವಿಟ್ಟ ಹಸು. ಸಮಾಂಸಮೀನಾ — ೧ ವರ್ಷವರ್ಷವೂ ಕರು ಹಾಕುವ ಹಸು. ಊಧಃ (ಸಾಂತನ) ಆಪೀನಂ — ೨ ಕೆಚ್ಚಲು. ಶಿವಕಃ ಕೀಲಕಃ — ೨ ದನ ಕಟ್ಟುವ ಗೂಟ. ದಾಮ (ನಾಂತ ನ) ಸಂದಾನಂ — ದನಕಟ್ಟುವ ಹಗ್ಗ. ದಾಮನೀ (ಸ್ತ್ರೀ) — ೧ ಪಶುರಜ್ಜುಃ — ಹಸುವಿನ ಕುತ್ತಿಗೆಗೆ ಕಟ್ಟುವ ಹಗ್ಗ. ವೈಶಾಖಃ ಮಂಥಃ ಮಂಥಾನಃ ಮಂಥಾಃ (ನಾಂತ ಪು) ಮಂಥದಂಡಕಃ — ೫ ಕಡಗೋಲು. ಕುಟರಃ ದಂಡಃ ವಿಷ್ಕಂಭಃ — ೩ ಮೊಸರು ಕಡೆಯುವ ಕಂಬ. ಮಂಥನೀ, ಗರ್ಗರೀ—ಮೊಸರು ಕಡೆಯುವ ಪಾತ್ರ ಉಷ್ಟ್ರಃ ಕ್ರಮೇಳಕಃ ಮಯಃ ಮಹಾಂಗಃ —೪ ಒಂಟೆ. ಕರಭಃ — ೧ ಶಿಶುಃ — ಒಂಟೇ ಮರಿ. ಶೃಂಖಲಕಾಃ — ೧ ದಾರವೈಃ ಪಾದಬಂಧನೈಃ ಯುಕ್ತಾಃ ಕರಭಾಃ — ಮರದ ಸಂಕೋಲೆಯಿಂದ ಕಾಲು ಕಟ್ಟಿಹಾಕಿದ ಒಂಟೇ ಮರಿಗಳು.॥ ೭೮ ॥

ಅಜಾ ಛಾಗೀ — ೨ ಹೆಣ್ಣು ಆಡು. ತುಭಃ ಛಾಗಃ ಬಸ್ತಃ ಛಗಲಕಃ ಅಜಃ — ೫ ಗಂಡು ಆಡು, ಹೋತ. ಮೇಢ್ರಃ (ಮೇಂಡಃ) ಉರಭ್ರಃ ಉರಣಃ ಊರ್ಣಾಯುಃ ಮೇಷಃ ವೃಷ್ಣಿಃ ಏಡಕಃ — ೭ ಕುರಿ. ಔಷ್ಟ್ರಕಂ — ಒಂಟೆಯ ಗುಂಪು. ಔರಭ್ರಕಂ — ಕುರಿಯ ಮಂದೆ. ಆಜಕಂ — ಆಡಿನ ಹಿಂಡು. ಚಕ್ರೀವಂತಃ (ತಾಂತ ಬ) ಬಾಲೇಯಾಃ ರಾಸಭಾಃ ಗರ್ದಭಾಃ ಖರಾಃ — ೫ ಕತ್ತೆ. ವೈದೇಹಕಃ ಸಾರ್ಥವಾಹಃ ನೈಗಮಃ ವಾಣಿಜಃ

ವೈದೇಹಕಃ ಸಾರ್ಥವಾಹೋ ನೈಗಮೋ ವಾಣಿಜೋ ವಣಿಕ್ ॥ ೭೬೫ ॥
ಪಣ್ಯಾಜೀವೋ ಹ್ಯಾಪಣಿಕಃ ಕ್ರಯವಿಕ್ರಯಿಕಶ್ಚ ಸಃ ।
ವಿಕ್ರೇತಾ ಸ್ಯಾದ್ವಿಕ್ರಯಿಕಃ ಕ್ರಾಯಕಃ ಕ್ರಯಿಕಸ್ಸಮೌ ॥ ೭೬೬ ॥
ವಾಣಿಜ್ಯಂ ತು ವಣಿಜ್ಯಾ ಸ್ಯಾನ್ಮೂಲ್ಯಂ ವಸ್ನೋಽಪ್ಯವಕ್ರಯಃ ।
ನೀವೀ ಪರಿಪಣೋ ಮೂಲಧನಂ ಲಾಭೋಽಧಿಕಂ ಫಲಮ್ ॥ ೭೬೭ ॥
ಪರಿದಾನಂ ಪರೀವರ್ತೋ ನೈಮೇಯ ನಿಮಯಾವಪಿ ।
ಪುಮಾನುಪನಿಧಿರ್ನ್ಯಾಸಃ ಪ್ರತಿದಾನಂ ತದರ್ಪಣಮ್ ॥ ೭೬೮ ॥
ಕ್ರಯೇ ಪ್ರಸಾರಿತಂ ಕ್ರಯ್ಯಂ ಕ್ರೇಯಂ ಕ್ರೇತವ್ಯಮಾತ್ರಕೇ ।
ವಿಕ್ರೇಯಂ ಪಣಿತವ್ಯಂ ಚ ಪಣ್ಯಂ ಕ್ರಯ್ಯಾದಯಸ್ತ್ರಿಷು ॥ ೭೬೯ ॥
ಕ್ಲೀಬೇ ಸತ್ಯಾಪನಂ ಸತ್ಯಂಕಾರಃ ಸತ್ಯಾಕೃತಿಃ ಸ್ತ್ರಿಯಾಮ್ ।
ವಿಪಣೋ ವಿಕ್ರಯಸ್ಸಂಖ್ಯಾಃ ಸಂಖ್ಯೇಯೇ ಹ್ಯಾದಶ ತ್ರಿಷು ॥ ೭೭೦ ॥

---

ವಣಿಕ್ (ಜಾಂತ) ಪಣ್ಯಾಜೀವಃ ಆಪಣಿಕಃ ಕ್ರಯವಿಕ್ರಯಿಕಃ — ೮ ವರ್ತಕ, ವ್ಯಾಪಾರಿ, ಸೆಟ್ಟಿ. ವಿಕ್ರೇತಾ (ಋಕಾರಾಂತ) ವಿಕ್ರಯಿಕಃ — ೨ ಮಾರುವವನು. ಕ್ರಾಯಿಕಃ (ಕ್ರಾಯಕಃ) ಕ್ರಯಿಕಃ — ೨ ಕೊಂಡುಕೊಳ್ಳುವವನು ವಾಣಿಜ್ಯಂ ವಣಿಜ್ಯಾ — ವ್ಯಾಪಾರ, ವರ್ತಕತನ. ಮೂಲ್ಯಂ ವಸ್ನಃ ಅವಕ್ರಯಃ — ೩ ಕ್ರಯ, ಬೆಲೆ. ನೀವೀ (ಸ್ತ್ರೀ) ಪರಿಪಣಃ ಮೂಲಧನಂ — ೩ ಭಂಡವಾಳ, ಮೂಲಧನ. ಲಾಭಃ — ಅಧಿಕಂ ಫಲಂ — ಭಂಡವಾಳದ ಮೇಲೆ ಅಧಿಕವಾಗಿ ಬಂದ ಹಣ, ನಫೆ. ಪರಿದಾನಂ ಪರೀವರ್ತಃ ನೈಮೇಯಃ ನಿಮಯಃ — ಒಂದನ್ನು ಕೊಟ್ಟು ಮತ್ತೊಂದನ್ನು ತೆಗೆದುಕೊಳ್ಳುವುದು, ಪರಿವರ್ತನೆ. ॥ ೭೬೭ ॥

ಉಪನಿಧಿಃ (ಪು) ನ್ಯಾಸಃ — ೨ ಬಚ್ಚಿಡುವುದು. ಪ್ರತಿದಾನಂ — ೧ ತದರ್ಪಣಂ — ಬಚ್ಚಿಟ್ಟದ್ದನ್ನು ಕೊಡುವುದು. ಕ್ರಯ್ಯಂ — ಕ್ರಯೇ ಪ್ರಸಾರಿತಂ — ಮಾರುವುದಕ್ಕಾಗಿ ಅಂಗಡಿಯಲ್ಲಿಟ್ಟದ್ದು. ಕ್ರೇಯಂ — ಕ್ರೇತವ್ಯಮಾತ್ರಕೇ — ಮಾರಲು ಯೋಗ್ಯವಾದ ವಸ್ತು. ವಿಕ್ರೇಯಂ — ಪಣಿತವ್ಯಂ ಪಣ್ಯಂ — ೩ ಮಾರಲ್ಪಡುವ ಪದಾರ್ಥಗಳು. ಕ್ರಯ್ಯಾದಯಃ ತ್ರಿಷು — ಕ್ರಯ್ಯ ಮುಂತಾದ ಪದಗಳು ತ್ರಿಲಿಂಗಗಳಲ್ಲಿಯೂ ಇರುತ್ತವೆ. ಸತ್ಯಾಪನಂ ಸತ್ಯಂಕಾರಃ ಸತ್ಯಾಕೃತಿಃ — ೩ ವ್ಯಾಪಾರದ ಒಪ್ಪಂದ, ಸಂಚಕಾರ, ವಿಪಣಃ ವಿಕ್ರಯಃ — ೨ ಮಾರುವುದು. ಆದಶ ಸಂಖ್ಯಾಃ ಸಂಖ್ಯೇಯೇಷು ತ್ರಿಷುಃ — ಒಂದರಿಂದ ಹತ್ತರವರೆಗೆ ಇರುವ ಸಂಖ್ಯಾವಾಚಕಗಳಾದ ಏಕಾದಿಗಳು, ಸಂಖ್ಯಾದಿಂದ ಕೂಡಿಸಿ ಪದಾರ್ಥವನ್ನು ಹೇಳುವಾಗ ತ್ರಿಲಿಂಗಗಳಾಗುತ್ತವೆ. ಉದಾ : — ಏಕಃ ಚಂದ್ರಃ

ವಿಂಶತ್ಯಾದ್ಯಾಸ್ಸದೈಕತ್ವೇ ಸರ್ವಾಃ ಸಂಖ್ಯೇಯ ಸಂಖ್ಯಯೋಃ ।
ಸಂಖ್ಯಾರ್ಥೇ ದ್ವಿಬಹುತ್ವೇಸ್ತಾಸ್ತಾಸು ಚಾನವತೇಃ ಸ್ತ್ರಿಯಃ ॥ ೭೭೧ ॥
ಪಂಕ್ತೇಶ್ಶತಸಹಸ್ರಾದಿ ಕ್ರಮಾದ್ದಶಗುಣೋತ್ತರಮ್ ।
ಯೌತವಂ ದ್ರುವಯಂ ಪಾಯ್ಯಮಿತಿ ಮಾನಾರ್ಥಕಂ ತ್ರಯಮ್ ॥ ೭೭೨ ॥
ಮಾನಂ ತುಲಾಂಗುಲಿಪ್ರಸ್ಥೈರ್ಗುಂಜಾಃ ಪಂಚಾದ್ಯಮಾಷಕಃ ।
ತೇ ಷೋಡಶಾಕ್ಷಃ ಕರ್ಷೋಽಸ್ತ್ರೀ ಪಲಂ ಕರ್ಷ ಚತುಷ್ಟಯಮ್ ॥ ೭೭೩ ॥

---

ಏಕಾ ಸ್ತ್ರೀ, ಏಕಂ ಫಲಮ್. ವಿಂಶತ್ಯಾದ್ಯಾಸ್ಸರ್ವಾಃ ಸಂಖ್ಯೇಯ ಸಂಖ್ಯಯೋಸ್ಸದಾ ಏಕತ್ವೇ — ಇಪ್ಪತ್ತರಿಂದ (ವಿಂಶತಿಃ) ತೊಂಬತ್ತೆಂಟರ (ಅಷ್ಟನವತಿಃ) ವರೆಗಿರುವ ಸಂಖ್ಯಾವಾಚಕ ಶಬ್ದಗಳು ಕೇವಲ ಸಂಖ್ಯೆಯನ್ನು ಮತ್ತು ಸಂಖ್ಯಾವಾಚಕದಿಂದ ಕೂಡಿದ ವಸ್ತುವನ್ನು ಹೇಳುವಾಗ ಯಾವಾಗಲೂ ಏಕವಚನದಲ್ಲಿಯೇ ಇರುತ್ತವೆ. ಉದಾ : ಗವಾಂ ವಿಂಶತಿಃ ವಿಂಶತಿರ್ಗಾವಃ ಸಂಖ್ಯಾರ್ಥೇ ದ್ವಿ ಬಹುತ್ವೇ ಸಃ — ಇವುಗಳು ಕೇವಲ ಸಂಖ್ಯಾವಾಚಕವಾಗಿರುವಾಗ ದ್ವಿವಚನ ಬಹುವಚನಗಳಲ್ಲಿಯೂ ಇರುತ್ತವೆ. ಉದಾ: — ದ್ವೇ ವಿಂಶತೀ (೪೦) ತಿಸ್ರಃ ವಿಂಶತಯಃ (೬೦) ತಾಸು ಆನವತೇಃ ಸ್ತ್ರಿಯಃ — ವಿಂಶತಿ (೨೦) ಪದದಿಂದ ನವತಿ (೯೦) ಪದದವರೆಗಿರುವವುಗಳು ಸ್ತ್ರೀಲಿಂಗಗಳಾಗಿಯೇ ಇರುತ್ತವೆ. ಪಂಕ್ತೇಃ ಕ್ರಮಾತ್ ದಶಗುಣೋತ್ತರಂ ಶತಸಹಸ್ರಾದಿ — ಹತ್ತರಿಂದ ಕ್ರಮವಾಗಿ ಹತ್ತರಷ್ಟು ಹೆಚ್ಚಾದಂತೆ ಶತ, ಸಹಸ್ರ ಲಕ್ಷಾದಿಗಳು ಆಗುತ್ತವೆ. ಹತ್ತು ಹತ್ತಾದರೆ ನೂರು, ಇದು ಹತ್ತಾದರೆ ಸಾವಿರ, ಸಾವಿರ ಹತ್ತಾದರೆ ಆಯುತ (ಹತ್ತು ಸಾವಿರ) ಅದು ಹತ್ತಾದರೆ ಲಕ್ಷ. ಲಕ್ಷ ಹತ್ತಾದರೆ ಪ್ರಯುತ (೧೦ ಲಕ್ಷ) ಅದು ಹತ್ತಾದರೆ ಕೋಟಿ, ಹೀಗೆ 8 ಸ್ಥಾನದವರೆಗೆ ಸಂಖ್ಯೆ ಇರುತ್ತದೆ. ಯೌತವಂ (ಪೌತವಂ) ದ್ರುವಯಂ ಪಾಯ್ಯಂ — ಇತಿ ತ್ರಯಂ ಮಾನಾರ್ಥಕಮ್ — ಇವು ಮೂರು ತೂಕ, ಅಳತೆಯನ್ನು ಹೇಳುತ್ತವೆ. ಮಾನಂ — ತುಲಾಂಗುಳಿಪ್ರಸ್ಥೈಃ — ತಕ್ಕಡಿ ಮುಂತಾದವುಗಳಿಂದಲೂ, ಬೆರಳು (ಅಂಗುಲ) ಮುಂತಾದವುಗಳಿಂದಲೂ, ಸೇರು ಮುಂತಾದವುಗಳಿಂದಲೂ, ಅಳೆಯಲ್ಪಡುವ ಮೂರು ರೀತಿಯಾದ ಅಳತೆ. ತಕ್ಕಡಿಯಿಂದ ತೂಗುವುದಕ್ಕೆ ಉನ್ಮಾನವೆಂದೂ, ಅಂಗುಳಾದಿಗಳಿಂದ ಅಳೆಯುವುದಕ್ಕೆ ಪ್ರಮಾಣವೆಂದೂ, ಸೇರು ಮುಂತಾದವುಗಳಿಂದ ಅಳೆಯುವುದಕ್ಕೆ ಪರಿಮಾಣವೆಂದೂ ಹೆಸರು. ಆದ್ಯಮಾಷಕಃ — ಪಂಚ ಗುಂಜಾಃ — ೫ ಗುಲಗಂಜಿ ತೂಕ. ॥ ೭೭೨ ॥

ಅಕ್ಷಃ ಕರ್ಷಃ — ೨೧೬ ಆದ್ಯಮಾಷಕ ತೂಕ, ೮೦ ಗುಲಗಂಜಿ ತೂಕ. ಪಲಂ — ೧೪ ಕರ್ಷ ತೂಕ. ಸುವರ್ಣಃ ಬಿಸ್ತಃ — ೨ ಅಕ್ಷ ತೂಕದ ಚಿನ್ನ.

ಸುವರ್ಣ ಬಿಸ್ತೌ ಹೇಮ್ನೋಽಕ್ಷೇ ಕುರುಬಿಸ್ತಸ್ತು ತತ್ಪಲೇ ।
ತುಲಾ ಸ್ತ್ರಿಯಾಂ ಪಲಶತಂ ಭಾರಸ್ಸ್ಯಾದ್ವಿಂಶತಿಸ್ತುಲಾ ॥ ೭೭೪ ॥
ಆಚಿತೋ ದಶ ಭಾರಾಸ್ಸ್ಯುಃ ಶಾಕಟೋ ಭಾರ ಆಚಿತಃ ।
ಕಾರ್ಷಾಪಣಃ ಕಾರ್ಷಿಕಃ ಸ್ಯಾತ್ಕಾರ್ಷಿಕೇ ತಾಮ್ರಿಕೇ ಪಣಃ ॥ ೭೭೫ ॥
ಅಸ್ತ್ರಿಯಾಮಾಢಕದ್ರೋಣೌ ಖಾರೀವಾಹೋ ನಿಕುಂಚಕಃ ।
ಕುಡವಃ ಪ್ರಸ್ಥ ಇತ್ಯಾದ್ಯಾಃ ಪರಿಮಾಣಾರ್ಥಕಾಃ ಪೃಥಕ್ ॥ ೭೭೬ ॥
(ಭಾಗ) ಅಂಶಸ್ತುರೀಯಃ ಪಾದಸ್ಸ್ಯಾದಂಶಭಾಗೌ ಚ ವಂಟಕಃ ।
ದ್ರವ್ಯಂ ವಿತ್ತಂ ಸ್ವಾಪತೇಯಂ ರಿಕ್ಥಮೃಕ್ಥಂ ಧನಂ ವಸು ॥ ೭೭೭ ॥
ಹಿರಣ್ಯಂ ದ್ರವಿಣಂ ದ್ಯುಮ್ನಮರ್ಥ ರೈ ವಿಭವಾ ಅಪಿ ।
ಸ್ಯಾತ್ಕೋಽಶಷ್ಟ ಹಿರಣ್ಯಂ ಚ ಹೇಮರೂಪ್ಯೇ ಕೃತಾಕೃತೇ ॥ ೭೭೮ ॥
ತಾಭ್ಯಾಂ ಯದನ್ಯತ್ತತ್ಕುಪ್ಯಂ ರೂಪ್ಯಂ ತದ್ದ್ವಯಮಾಹತಮ್ ।
ಗಾರುತ್ಮತಂ ಮರಕತಮಶ್ಮಗರ್ಭೋ ಹರಿನ್ಮಣಿಃ ॥ ೭೭೯ ॥
ಶೋಣರತ್ನಂ ಲೋಹಿತಕಃ ಪದ್ಮರಾಗೋಽಥ ಮೌಕ್ತಿಕಮ್ ।

---

ತುಲಾ — ನೂರು ಪಲಗಳ ತೂಕ, ೧೨ ಸೇರು, ಭಾರಃ — ೨೦ ತುಲಾ ತೂಕ. ಆಚಿತಃ — ೧೦ ಭಾರ ತೂಕ, ೨೦೦ ತೊಲೆ. ಶಾಕಟಃ — ಭಂಡಿ ಮೇಲೆ ಹೊರ ತಕ್ಕ ಭಾರ. ಕಾರ್ಷಾಪಣಃ ಕಾರ್ಷಿಕಃ — ೨ ೧ ರೂಪಾಯಿ ತೂಕ ೧೬ ಮಾಷಕಗಳಿಗೆ ಒಂದು ಕರ್ಷ. ಪಣಃ — ಕರ್ಷ ತೂಕದ ತಾಮ್ರದ ನಾಣ್ಯ. ಆಢಕಃ — ೧ ಕೊಳಗ. ದ್ರೋಣಃ—೨ ಕೊಳಗ. ಖಾರೀವಾಹಃ, ನಿಕುಂಚಕಃ—ಸೊಲಿಗೆ. ಕುಡವಃ — ಮಾನಪಡಿ, ಸಿದ್ದೆ, ಪಾವು. ಪ್ರಸ್ಥಃ — ಸೇರು. ಇವು ಬೇರೆ ಬೇರೆ ಅಳತೆಯನ್ನು ಹೇಳುತ್ತವೆ. ಪಾದಃ — ತುರೀಯಭಾಗಃ — ಕಾಲುಭಾಗ. ಅಂಶಃ ಭಾಗಃ ವಂಟಕಃ — ೩ ಕೆಲವು ಭಾಗ, ಸ್ವಲ್ಪವಾದ ಅಂಶ. ದ್ರವ್ಯಂ ವಿತ್ತಂ ಸ್ವಾಪತೇಯಂ ರಿಕ್ಥಂ ಋಕ್ಥಂ ಧನಂ ವಸು (ನ) ಹಿರಣ್ಯಂ ದ್ರವಿಣಂ ದ್ಯುಮ್ನಂ ಅರ್ಥಃ ರಾಃ (ಐಕಾರಾಂತ ಪು) ವಿಭವಃ — ೧೨ ಹಣ, ಧನ, ಕೋಶಃ ಹಿರಣ್ಯಂ — ೨ ಒಡವೆ ಮಾಡಲು ಗಟ್ಟಿ ಮಾಡಿದ ಮತ್ತು ಗಣಿಯಿಂದ ತೆಗೆದು ಅದುರಾಗಿರುವ ಚಿನ್ನ, ಬೆಳ್ಳಿ, (ಕೃತಾಕೃತೇ ಹೇಮರೂಪೇ) ಕುಪ್ಯಂ — ತಾಭ್ಯಾಂ ಯದನ್ಯತ್ — ಚಿನ್ನ ಬೆಳ್ಳಿಗಿಂತ ಬೇರೆಯಾದ ತಾಮ್ರ, ಹಿತ್ತಾಳೆ ಮೊದಲಾದ ಲೋಹ ಗಳು. ರೂಪ್ಯಂ — ಆಹತಂ ತದ್ದ್ವಯಂ — ಮುದ್ರೆ ಹಾಕಿ ಎರಕ ಹೊಯ್ದಿರುವ ಚಿನ್ನ ಬೆಳ್ಳಿಯ ನಾಣ್ಯ. ॥ ೭೭೮ ॥

ಗಾರುತ್ಮತಂ ಮರಕತಂ ಅಶ್ಮಗರ್ಭಃ ಹರಿನ್ಮಣಿಃ — ೪ ಪಚ್ಚೆಮಣಿ, ಶೋಣರತ್ನಂ ಲೋಹಿತಕಃ ಪದ್ಮರಾಗಃ — ೩ ಕೆಂಪು ರತ್ನ. ಮೌಕ್ತಿಕಂ

ಮುಕ್ತಾಥ ವಿದ್ರುಮಃ ಪುಂ ಸಿ ಪ್ರವಾಳಂ ಪುಂನಪುಂಸಕಮ್ ॥ ೭೮೦ ॥
ರತ್ನಂ ಮಣಿರ್ದ್ವಯೋರಶ್ಮಜಾತೌ ಮುಕ್ತಾದಿಕೇ ಪಿ ಚ ।
ಸ್ವರ್ಣಂ ಸುವರ್ಣಂ ಕನಕಂ ಹಿರಣ್ಯಂ ಹೇಮ ಹಾಟಕಮ್ ॥ ೭೮೧ ॥
ತಪನೀಯಂ ಶಾತಕುಂಭಂ ಗಾಂಗೇಯಂ ಭರ್ಮ ಕರ್ಬುರಮ್ ।
ಚಾಮೀಕರಂ ಜಾತರೂಪಂ ಮಹಾರಜತ ಕಾಂಚನೇ ॥ ೭೮೨ ॥
ರುಕ್ಮಂ ಕಾರ್ತಸ್ವರಂ ಜಾಂಬೂನದಮಷ್ಟಾಪದೋ ಸ್ತ್ರಿಯಾಮ್ ।
ಅಲಂಕಾರಸುವರ್ಣಂ ಯಚ್ಛೃಂಗೀಕನಕಮಿತ್ಯದಃ ॥ ೭೮೩ ॥
ದುರ್ವರ್ಣಂ ರಜತಂ ರೂಪ್ಯಂ ಖರ್ಜೂರಂ ಶ್ವೇತಮಿತ್ಯಪಿ ।
ರೀತಿಃ ಸ್ತ್ರಿಯಾಮಾರಕೂಟೋ ನ ಸ್ತ್ರಿಯಾಮಥ ತಾಮ್ರಕಮ್ ॥ ೭೮೪ ॥
ಶುಲ್ಬಂ ಮ್ಲೇಚ್ಛಮುಖಂ ದ್ವ್ಯಷ್ಟ ವರಿಷ್ಠೋದುಂಬರಾಣಿ ಚ ।
ಲೋಹೋ ಸ್ತ್ರೀ ಶಸ್ತ್ರಕಂ ತೀಕ್ಷ್ಣಂ ಪಿಂಡಂ ಕಾಲಾಯಸಾಯಸೀ ॥ ೭೮೫ ॥
ಅಶ್ಮಸಾರೋಥ ಮಂಡೂರಂ ಸಿಂಹಾಣಮಪಿ ತನ್ಮಲೇ ।
ಸರ್ವಂ ಚ ತೈಜಸಂ ಲೋಹಂ ವಿಕಾರಸ್ತ್ವಯಸಃ ಕುಶೀ ॥ ೭೮೬ ॥
ಕ್ಷಾರಃ ಕಾಚೋಽಥ ಚಪಲೋ ರಸಸ್ಸೂತಶ್ಚ ಪಾರದೇ ।

---

ಮುಕ್ತಾ — ೨ ಮುತ್ತು. ವಿದ್ರುಮಃ ಪ್ರವಾಳಂ — ೨ ಹವಳ. ರತ್ನಂ ಮಣಿಃ (ಪುಂ ಸ್ತ್ರೀ) — ಮರಕತಾದಿ ರತ್ನಗಳಿಗೂ, ಮುತ್ತು ಹವಳಗಳಿಗೂ ಹೆಸರು. ಸ್ವರ್ಣಂ ಸುವರ್ಣಂ ಕನಕಂ ಹಿರಣ್ಯಂ ಹೇಮ (ನಾಂತನ) ಹಾಟಕಂ ತಪನೀಯಂ ಶಾತಕುಂಭಂ ಗಾಂಗೇಯಂ ಭರ್ಮ (ನಾಂತ ನ) ಕರ್ಬುರಂ ಚಾಮೀಕರಂ ಜಾತರೂಪಂ ಮಹಾರಜತಂ ಕಾಂಚನಂ ರುಕ್ಮಂ ಕಾರ್ತಸ್ವರಂ ಜಾಂಬೂನದಂ ಅಷ್ಟಾಪದಃ (ಪುಂ ನ) — ೧೯ ಚಿನ್ನದ ಹೆಸರು. ಶೃಂಗೀಕನಕಂ — ಯತ್ ಅಲಂಕಾರಸುವರ್ಣಂ — ಒಡವೆ ಮಾಡಿದ ಚಿನ್ನ, ಚಿನ್ನದ ಆಭರಣ. ದುರ್ವರ್ಣಂ ರಜತಂ ರೂಪ್ಯಂ ಖರ್ಜೂರಂ ಶ್ವೇತಂ — ೫ ಬೆಳ್ಳಿ. ರೀತಿಃ (ಸ್ತ್ರೀ) ಆರಕೂಟಃ — ೨ ಹಿತ್ತಾಳೆ. ತಾಮ್ರಕಂ ಶುಲ್ಬಂ ಮ್ಲೇಚ್ಛಮುಖಂ ದ್ವ್ಯಷ್ಟಂ ವರಿಷ್ಠಂ ಉದುಂಬರಂ — ೬ ತಾಮ್ರದ ಹೆಸರು. ಲೋಹಃ ಶಸ್ತ್ರಕಂ ತೀಕ್ಷ್ಣಂ ಪಿಂಡಂ ಕಾಲಾಯಸಂ ಆಯಃ (ಸಾಂತ ನ) ಅಶ್ಮಸಾರಃ — ೭ ಕಬ್ಬಿಣ. ಮಂಡೂರಂ ಸಿಂಹಾಣಂ — ೨ ಕಬ್ಬಿಣದ ಕಿಟ್ಟ. ॥ ೭೮೫ ॥

ಲೋಹಂ — ೧ ಸರ್ವಂ ತೈಜಸಂ — ಪ್ರಕಾಶಮಾನವಾದ ಚಿನ್ನ, ಬೆಳ್ಳಿ, ತಾಮ್ರ, ಕಂಚು, ಸೀಸ, ತವರ, ಕಬ್ಬಿಣಗಳಿಗೆ ಹೆಸರು. ಕುಶೀ — ಅಯಸಃ ವಿಕಾರಃ — ಕಬ್ಬಿಣದ ಪದಾರ್ಥ. ಕ್ಷಾರಃ ಕಾಚಃ — ೨ ಗಾಜು, ಕನ್ನಡಿ.

ಗವಳಂ ಮಾಹಿಷಂ ಶೃಂಗಮಭ್ರಕಂ ಗಿರಿಜಾಮಲೇ ॥ ೭೮೭ ॥
ಸ್ರೋತೋಂಜನಂ ತು ಸೌವೀರಂ ಕಾಪೋತಾಂಜನ ಯಾಮುನೇ ।
ತುತ್ಥಾಂಜನಂ ಶಿಖಿಗ್ರೀವಂ ವಿತುನ್ನಕ ಮಯೂರಕೇ ॥ ೭೮೮ ॥
ಕರ್ಪರೀ ದಾರ್ವಿಕಾಕ್ವಾಥೋದ್ಭವಂ ತುತ್ಥಂ ರಸಾಂಜನಮ್ ।
ರಸಗರ್ಭಂ ತಾರ್ಕ್ಷ್ಯಶೈಲಂ ಗಂಧಾಶ್ಮನಿ ತು ಗಂಧಿಕಃ ॥ ೭೮೯ ॥
ಸೌಗಂಧಿಕಶ್ಚ ಚಕ್ಷುಷ್ಯಾಕುಲಾಲ್ಯೌ ತು ಕುಲತ್ಥಿಕಾ ।
ರೀತಿ ಪುಷ್ಪಂ ಪುಷ್ಪಕೇತುಃ ಪೌಷ್ಪಕಂ ಕುಸುಮಾಂಜನಮ್ ॥ ೭೯೦ ॥
ಪಿಂಜರಂ ಪೀತನಂ ತಾಲಮಾಲಂ ಚ ಹರಿತಾಲಕೇ ।
ಗೈರೇಯಮರ್ಥ್ಯಂ ಗಿರಿಜಮಶ್ಮಜಂ ಚ ಶಿಲಾಜತು ॥ ೭೯೧ ॥
ಬೋಲ ಗಂಧರಸ ಪ್ರಾಣ ಪಿಂಡ ಗೋಪ ರಸಾಸ್ಸಮಾಃ ।
ಡಿಂಡೀರೋಬ್ಧಿಕಫಃ ಫೇನಸ್ಸಿಂದೂರಂ ನಾಗಸಂಭವಮ್ ॥ ೭೯೨ ॥
ನಾಗ ಸೀಸಕ ಯೋಗೇಷ್ಟ ವಪ್ರಾಣಿ ತ್ರಪು ಪಿಚ್ಚಟಮ್ ।
ರಂಗವಂಗೇ ಅಥ ಪಿಚುಸ್ತೂಲೋಽಥ ಕಮಲೋತ್ತರಮ್ ॥ ೭೯೩ ॥

---

ಚಪಲಃ ರಸಃ ಸೂತಃ ಪಾರದಃ — ೪ ಪಾದರಸ. ಗವಲಂ — ೧ ಮಾಹಿಷಂ ಶೃಂಗಂ — ಎಮ್ಮೆಯ ಕೊಂಬು. ಅಭ್ರಕಂ ಗಿರಿಜಂ ಅಮಲಂ — ೩ ಅಭ್ರಕ ವೆಂಬ ಕಾಗೆ ಬಂಗಾರ. ಸ್ರೋತೋಂಜನಂ ಸೌವೀರಂ ಕಾಪೋತಾಂಜನಂ ಯಾಮುನಂ — ೪ ಸೌವೀರಾಂಜನದ ಹೆಸರು. ತುತ್ಥಾಂಜನಂ ಶಿಖಿಗ್ರೀವಂ ವಿತುನ್ನಕಂ ಮಯೂರಕಂ — ೪ ನ್ಮೈಲುತುತ್ತ. ಕರ್ಪರೀ ದಾರ್ವಿಕಾ — ೨ ಮರದರಶಿನದ ಕಷಾಯದಲ್ಲಿ ಕುದಿಸಿದ ತುತ್ಥಾಂಜನ. ರಸಾಂಜನಂ ರಸಗರ್ಭಂ ತಾರ್ಕ್ಷ್ಯಶೈಲಂ — ೩ ರಸಾಂಜನ. ಗಂಧಾಶ್ಮಾ (ನಾಂತ) ಗಂಧಕಃ ಸೌಗಂಧಿಕಃ — ೩ ಗಂಧಕ. ಚಕ್ಷುಷ್ಯಾ ಕುಲಾಲೀ ಕುಳತ್ಥಿಕಾ — ೩ ಕುಳುತ್ಥಾಂಜನ. ರೀತಿಪುಷ್ಪಂ ಪುಷ್ಪಕೇತುಃ ಪೌಷ್ಪಕಂ ಕುಸುಮಾಂಜನಂ — ೪ ಕುಸುಮಾಂಜನ. ಪಿಂಜರಂ ಪೀತನಂ ತಾಲಂ ಆಲಂ ಹರಿತಾಲಕಂ — ೫ ಹರಿದಳ. ಗೈರೇಯಂ ಅರ್ಥ್ಯಂ ಗಿರಿಜಂ ಅಶ್ಮಜಂ ಶಿಲಾಜತು — ೫ ಶಿಲಾಜತು. ಬೋಳಂ ಗಂಧರಸಃ ಪ್ರಾಣಃ ಪಿಂಡಂ ಗೋಪಃ ರಸಃ — ೬ ಬಾಣಂತಿ ಬೋಳ ॥ ೫೯೧ ॥

ಡಿಂಡಿರಃ ಅಬ್ಧಿಕಫಃ ಫೇನಃ — ೩ ಸಮುದ್ರದ ನೊರೆ. ಸಿಂದೂರಂ ನಾಗಸಂಭವಂ — ೨ ನಾಗಸಿಂದೂರ, ಚಂದ್ರದ ಪುಡಿ. ನಾಗಂ ಸೀಸಕಂ ಯೋಗೇಷ್ಟಂ ವಪ್ರಂ — ೪ ಸೀಸ. ತ್ರಪು ಪಿಚ್ಚಟಂ ರಂಗಂ ವಂಗಂ — ೪ ತವರ. ಪಿಚುಃ ತೂಲಃ — ೨ ಹತ್ತಿ. ಕಮಲೋತ್ತರಂ ಕುಸುಂಭಂ ವಹ್ನಿಶಿಖಂ

ಸ್ಯಾತ್ಕುಸುಂಭಂ ವಹ್ನಿಶಿಖಂ ಮಹಾರಜನಮಿತ್ಯಪಿ ।
ಮೇಷಕಂಬಲ ಊರ್ಣಾಯುಃ ಶಶೋರ್ಣಂ ಶಶಲೋಮನಿ ॥ ೭೯೪ ॥
ಮಧುಕ್ಷೌದ್ರಂ ಮಾಕ್ಷಿಕಾದಿ ಮಧೂಚ್ಛಿಷ್ಟಂ ತು ಸಿಕ್ಥಕಮ್ ।
ಮನಶ್ಶಿಲಾ ಮನೋಗುಪ್ತಾ ಮನೋಹ್ವಾ ನಾಗಜಿಹ್ವಿಕಾ ॥ ೭೯೫ ॥
ನೈಪಾಲೀ ಕುನಟೀ ಗೋಲಾ ಯವಕ್ಷಾರೋ ಯವಾಗ್ರಜಃ ।
ಪಾಕ್ಯೋಥ ಸ್ವರ್ಜಿಕಾಕ್ಷಾರಃ ಕಾಪೋತಃ ಸುಖವರ್ಚಕಃ ॥ ೭೯೬ ॥
ಸೌವರ್ಚಲಂ ಸ್ಯಾದ್ರುಚಕಂ ತ್ವಕ್ ಕ್ಷೀರೀ ವಂಶರೋಚನಾ ।
ಶಿಗ್ರುಜಂ ಶ್ವೇತಮರಿಚಂ ಮೋರಟಂ ಮೂಲಮೈಕ್ಷವಮ್ ॥ ೭೯೭ ॥
ಗ್ರಂಥಿಕಂ ಪಿಪ್ಪಲೀಮೂಲಂ ಚಟಕಾಶಿರ ಇತ್ಯಪಿ ।
ಗೋಲೋಮೀ ಭೂತಕೇಶೋ ನಾ ಪತ್ರಾಂಗಂ ರಕ್ತಚಂದನಮ್ ॥ ೭೯೮ ॥
ತ್ರಿಕಟುತ್ರ್ಯೂಷಣಂ ವ್ಯೋಷಂ ತ್ರಿಫಲಾ ತು ಫಲತ್ರಿಕಮ್ ।

ಇತಿ ವೈಶ್ಯವರ್ಗಃ

---

ಮಹಾರಜನಂ — ೪ ಕುಸುಂಬೇ ಹೂವು. ಮೇಷಕಂಬಳಃ ಊರ್ಣಾಯುಃ — ೨ ಕರಿ ಕಂಬಳಿ. ಶಶೋರ್ಣಂ — ೧ ಶಶಲೋಮನಿ — ಮೊಲದ ಕೂದಲಿನಿಂದ ಮಾಡಿದ ವಸ್ತು, ಮೊಲದ ಕೂದಲು. ಮಧು (ನ) ಕ್ಷೌದ್ರಂ ಮಾಕ್ಷಿಕಂ — ೩ ಜೇನು ತುಪ್ಪ. ಮಧೂಚ್ಛಿಷ್ಟಂ ಸಿಕ್ಥಕಂ — ೨ ಜೇನು ನೊಣ. ಮನಶ್ಶಿಲಾ ಮನೋಗುಪ್ತಾ ಮನೋಹ್ವಾ ನಾಗಜಿಹ್ವಿಕಾ — ೪ ಮಣಿ ಶಿಲೆಯ ಹೆಸರು. ನೈಪಾಳೀ ಕುನಟೀ ಗೋಲಾ — ೩ ನೇಪಾಳದ ಮಣಿ ಶಿಲೆ. ಯವಾಕ್ಷಾರಃ ಯವಾಗ್ರಜಃ ಪಾಕ್ಯಃ — ೩ ಯವಕ್ಷಾರ. ಸರ್ಜಿಕಾಕ್ಷಾರಃ ಕಾಪೋತಃ ಸುಖವರ್ಚಕಃ ಸೌವರ್ಚಲಂ ರುಚಕಃ — ೫ ಸದ್ಯಕ್ಷಾರ. ತ್ವಕ್‌ಕ್ಷೀರಾ ವಂಶರೋಚನಾ — ೨ ತವಕ್ಷೀರ. ಶಿಗ್ರುಜಂ ಶ್ವೇತಮರಿಚಂ — ೨ ನುಗ್ಗೇ ಬೀಜ. ಮೋರಟಂ — ಐಕ್ಷವಂ ಮೂಲಂ — ಕಬ್ಬಿನ ಬೇರು. ಗ್ರಂಥಿಕಂ ಪಿಪ್ಪಲೀಮೂಲಂ ಚಟಕಾಶಿರಃ — ೩ ಹಿಪ್ಪಲಿ. ಗೋಲೋಮೀ (ಸ್ತ್ರೀ) ಭೂತಕೇಶಃ — ೨ ಜಟಮಾಂಸಿ. ಪತ್ರಾಂಗಂ ರಕ್ತಚಂದನಂ — ೨ ರಕ್ತಚಂದನ. ತ್ರಿಕಟುಃತ್ರ್ಯೂಷಣಂ ವ್ಯೂಷಂ — ೩ ಶುಂಠಿ, ಮೆಣಸು, ಹಿಪ್ಪಲಿ ಮೂರಕ್ಕೂ ಹೆಸರು. ತ್ರಿಫಲಾ — ಫಲತ್ರಿಕಂ —ನೆಲ್ಲಿಕಾಯಿ, ತಾರೇಕಾಯಿ, ಅಳಲೇ ಕಾಯಿ ಮೂರಕ್ಕೆ ಹೆಸರು. ॥ ೭೯೮ ॥

ವೈಶ್ಯವರ್ಗ ಮುಗಿದಿದೆ

## ಶೂದ್ರವರ್ಗಃ

ಶೂದ್ರಾಶ್ಚಾವರವರ್ಣಾಶ್ಚ ವೃಷಲಾಶ್ಚ ಜಘನ್ಯಜಾಃ ॥ ೯೯ ॥
ಆಚಾಂಡಾಲಾತ್ತು ಸಂಕೀರ್ಣಾ ಅಂಬಷ್ಠಕರಣಾದಯಃ ।
ಶೂದ್ರಾವಿಶೋಸ್ತು ಕರಣೋಽಂಬಷ್ಠೋ ವೈಶ್ಯಾ ದ್ವಿಜನ್ಮನೋಃ ॥ ೧೦೦ ॥
ಶೂದ್ರಾಕ್ಷತ್ರಿಯಯೋರುಗ್ರೋ ಮಾಗಧಃ ಕ್ಷತ್ರಿಯಾವಿಶೋಃ ।
ಮಾಹಿಷ್ಯೋಽರ್ಯಾಕ್ಷತ್ರಿಯಯೋಃ ಕ್ಷತ್ತಾರ್ಯಾಶೂದ್ರಯೋಃ ಸುತಃ ॥ ೧೦೧ ॥
ಬ್ರಾಹ್ಮಣ್ಯಾಂ ಕ್ಷತ್ರಿಯಾತ್ಸೂತಸ್ತಸ್ಯಾಂ ವೈದೇಹಕೋ ವಿಶಃ ।
ರಥಕಾರಸ್ತು ಮಾಹಿಷ್ಯಾತ್ಕರಣ್ಯಾಂ ಯಸ್ಯ ಸಂಭವಃ ॥ ೧೦೨ ॥
ಸ್ಯಾಚ್ಚಾಂಡಾಲಸ್ತು ಜನಿತೋ ಬ್ರಾಹ್ಮಣ್ಯಾಂ ವೃಷಲೇನ ಯಃ ।
ಕಾರುಃ ಶಿಲ್ಪೀ ಸಂಹತೈಸ್ತೈರ್ದ್ವಯೋಃ ಶ್ರೇಣಿಃ ಸಜಾತಿಭಿಃ ॥ ೧೦೩ ॥
ಕುಲಿಕಸ್ಸ್ಯಾತ್ಕುಲಶ್ರೇಷ್ಠೀ ಮಾಲಾಕಾರಸ್ತು ಮಾಲಿಕಃ ।

---

ಶೂದ್ರಃ ಅವರವರ್ಣಃ ವೃಷಲಃ ಜಘನ್ಯಜಃ — ೪ ಶೂದ್ರನ ಹೆಸರು. ಆಚಾಂಡಾಲಾತ್ ಅಂಬಷ್ಠಕರಣಾದಯಃ ಸಂಕೀರ್ಣಾಃ — ಇಲ್ಲಿಂದ ಮುಂದೆ ಚಾಂಡಾಲ ಶಬ್ದದ ವರೆಗಿರುವ ಶಬ್ದಗಳು ಸಂಕರ ಜಾತಿಯನ್ನು ಹೇಳುತ್ತವೆ. ಕರಣಃ — ಶೂದ್ರಾವಿಶೋಃ ಸುತಃ — ಶೂದ್ರಸ್ತ್ರೀ ವೈಶ್ಯಪುರುಷನಿಗೆ ಹುಟ್ಟಿದವನು. ಅಂಬಷ್ಠಃ — ವೈಶ್ಯಾದ್ವಿಜನ್ಮನೋಃ — ವೈಶ್ಯಸ್ತ್ರೀ ಬ್ರಾಹ್ಮಣ ಪುರುಷನಿಗೆ ಹುಟ್ಟಿದವನು. ಉಗ್ರಃ — ಶೂದ್ರಾಕ್ಷತ್ರಿಯಯೋಃ — ಶೂದ್ರ ಹೆಂಗಸಲ್ಲಿ ಕ್ಷತ್ರಿಯನಿಂದ ಹುಟ್ಟಿದವನು. ಮಾಗಧಃ — ಕ್ಷತ್ರಿಯಾವಿಶೋಃ — ಕ್ಷತ್ರಿಯ ಸ್ತ್ರೀಯಲ್ಲಿ ವೈಶ್ಯನಿಂದ ಜಾತನಾದವನು. ಮಾಹಿಷ್ಯಃ — ಅರ್ಯಾಕ್ಷತ್ರಿಯಯೋಃ —ವೈಶ್ಯಸ್ತ್ರೀಗೆ ಕ್ಷತ್ರಿಯನಿಂದ ಹುಟ್ಟಿದವನು. ಕ್ಷತ್ತಾ (ಋಕಾರಾಂತ) ಅರ್ಯಾಶೂದ್ರಯೋಃ — ವೈಶ್ಯಳಲ್ಲಿ ಶೂದ್ರನಿಂದ ಹುಟ್ಟಿದವನು. ಸೂತಃ —ಬ್ರಾಹ್ಮಣ್ಯಾಂ ಕ್ಷತ್ರಿಯಾತ್ ಜಾತಃ-ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು. ವೈದೇಹಕಃ — ತಸ್ಯಾಂ ವಿಶಃ ಜಾತಃ — ಬ್ರಾಹ್ಮಣಿಯಲ್ಲಿ ವೈಶ್ಯನಿಂದ ಹುಟ್ಟಿದವನು. ರಥಕಾರಃ — ಮಾಹಿಷ್ಯಾತ್ ಕರಣ್ಯಾಂ ಜಾತಃ — ಶೂದ್ರ ವೈಶ್ಯ ಸಂಬಂಧದಿಂದ ಹುಟ್ಟಿದ ಕರಣಿಯಲ್ಲಿ ವೈಶ್ಯಕ್ಷತ್ರಿಯ ಸಂಯೋಗದಿಂದ ಹುಟ್ಟಿದ ಮಾಹಿಷ್ಯನೆಂಬವನಿಂದ ಹುಟ್ಟಿದವನು. ಚಾಂಡಾಲಃ — ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನು. ಕಾರುಃ ಶಿಲ್ಪೀ (ನಾಂತ) — ೨ ಕೈ ಕೆಲಸದವ, ಬಡಗಿ, ಅಕ್ಕಸಾಲೆ ಅಗಸ ಮುಂತಾದವರು. ಶ್ರೇಣಿಃ (ಪು ಸ್ತ್ರೀ) — ಸಜಾತಿಭಿಃ ಸಂಹತೈಃ ತೈಃ — ಒಂದು ಜಾತಿಯ ಶಿಲ್ಪಿಗಳ ಗುಂಪು' ಕುಲಿಕಃ — ಕುಲಶ್ರೇಷ್ಠೀ — ಶಿಲ್ಪಿಗಳ ಯಜಮಾನ, ಮುಖ್ಯ ಶಿಲ್ಪಿ. ಮಾಲಾಕಾರಃ ಮಾಲಿಕಃ – ೨

ಕುಂಭಕಾರಃ ಕುಲಾಲಸ್ಸ್ಯಾತ್ಪಲಗಂಡಸ್ತು ಲೇಪಕಃ ॥ ೭೦೪ ॥
ತಂತುವಾಯಃ ಕುವಿಂದಸ್ಸ್ಯಾತ್ತುನ್ನವಾಯಸ್ತು ಸೌಚಿಕಃ ।
ರಂಗಾಜೀವಶ್ಚಿತ್ರಕರಃ ಶಸ್ತ್ರಮಾರ್ಜೋಽಸಿಧಾವಕಃ ॥ ೭೦೫ ॥
ಪಾದೂಕೃಚ್ಚರ್ಮಕಾರಸ್ಸ್ಯಾದ್ವ್ಯೋಕಾರೋ ಲೋಹಕಾರಕಃ ।
ನಾಡಿಂಧಮಃ ಸ್ವರ್ಣಕಾರಃ ಕಲಾದೋ ರುಕ್ಮಕಾರಕೇ ॥ ೭೦೬ ॥
ಸ್ಯಾಚ್ಛಾಂಖಿಕಃ ಶಾಂಬವಿಕಃ ಶೌಲ್ಬಿಕಸ್ತಾಮ್ರಕುಟ್ಟಕಃ ।
ತಕ್ಷಾ ತು ವರ್ಧಕಿಸ್ತ್ವಷ್ಟಾ ರಥಕಾರಶ್ಚ ಕಾಷ್ಠತಟ್ ॥ ೭೦೭ ॥
ಗ್ರಾಮಾಧೀನೋ ಗ್ರಾಮತಕ್ಷಃ ಕೌಟತಕ್ಷೋಽನಧೀನಕಃ ।
ಕ್ಷುರೀ ಮುಂಡೀ ದಿವಾಕೀರ್ತಿ ರ್ನಾಪಿತಾಂತಾವಸಾಯಿನಃ ॥ ೭೦೮ ॥
ನಿರ್ಣೇಜಕಸ್ಸ್ಯಾದ್ರಜಕಃ ಶೌಂಡಿಕೋ ಮುಂಡಹಾರಕಃ ।
ಜಾಬಾಲಸ್ಸ್ಯಾದಜಾಜೀವೋ ದೇವಾಜೀವಸ್ತು ದೇವಲಃ ॥ ೭೦೯ ॥

---

ಹೂವಾಡಿಗ. ಕುಂಭಕಾರಃ ಕುಲಾಲಃ — ಕುಂಬಾರ. ಪಲಗಂಡಃ ಲೇಪಕಃ – ೨ ಗಾರೆ ಕೆಲಸದವನು. ತಂತುವಾಯಃ ಕುವಿಂದಃ – ೨ ನೆಯ್ಗೆಯವನು, ದೇವಾಂಗದವನು. ತುನ್ನವಾಯಃ ಸೌಚಿಕಃ, ದರ್ಜಿ, ಚಿಪ್ಪಿಗ ॥ ೭೦೪ ॥

ರಂಗಾಜೀವಃ ಚಿತ್ರಕರಃ – ೨ ಚಿತ್ರಗಾರ. ಶಸ್ತ್ರಮಾರ್ಜಃ ಅಸಿಧಾವಕಃ – ೨ ಸಾಣೆ ಹಿಡಿಯುವವನು. ಪಾದೂಕೃತ್ (ತಾಂತ) ಚರ್ಮಕಾರಃ –೨ ಚಮ್ಮಾರ, ಮೋಚಿಯವನು, ಜೋಡು ಹೊಲಿಯುವವನು. ವ್ಯೋಕಾರಃ ಲೋಹಕಾರಕಃ – ೨ ಕಮ್ಮಾರ. ನಾಡಿಂಧಮಃ ಸ್ವರ್ಣಕಾರಃ ಕಲಾದಃ ರುಕ್ಮಕಾರಕಃ ೪ ಅಕ್ಕಸಾಲೆ. ಶಾಂಖಿಕಃ ಶಾಂಬವಿಕಃ – ೨ ಶಂಖ ಕೊರೆದು ವಡವೆ ಮಾಡುವವನು. ಶೌಲ್ಬಿಕಃ ತಾಮ್ರಕುಟ್ಟಕಃ – ೨ ಕಂಚುಗಾರ, ಹಿತ್ತಾಳೆ ತಾಮ್ರ ಕೆಲಸ ಮಾಡುವವನು. ತಕ್ಷಾ (ನಾಂತ) ವರ್ಧಕಿಃ ತ್ವಷ್ಟಾ (ಋಕಾರಾಂತ) ರಥಕಾರಃ ಕಾಷ್ಠತಟ್ (ಷಾಂತ) – ೫ ಬಡಗಿ. ಗ್ರಾಮತಕ್ಷಃ – ಹಳ್ಳಿಯ ಜನರಿಗೆ ಅಧೀನನಾಗಿ ಕೆಲಸ ಮಾಡುವ ಬಡಗಿ. ಕೌಟತಕ್ಷಃ – ಸ್ವತಂತ್ರವಾಗಿ ತನ್ನ ಮನೆಯಲ್ಲೇ ಕೆಲಸ ಮಾಡಿ ಜೀವಿಸುವ ಬಡಗಿ. ಕ್ಷುರೀ ಮುಂಡೀ (ನಾಂತ) ದಿವಾಕೀರ್ತಿಃ ನಾಪಿತಃ ಅಂತಾವಸಾಯಿ. (ನಾಂತ) – ೫ ಕ್ಷೌರಿಕ, ನಾಯಿಂದ. ಹಜಾಮ. ನಿರ್ಣೇಜಕಃ ರಜಕಃ – ೨ ಅಗಸ, ಮಡಿವಾಳ. ಶೌಂಡಿಕಃ ಮುಂಡಹಾರಕಃ – ೨ ಹೆಂಡ ಮಾರುವವನು, ಜಾಬಾಲಃ ಅಜಾಜೀವೀ (ವಃ) – ೨ ಕುರುಬ. ದೇವಾಜೀವಃ ದೇವಲಃ – ೨ ಪೂಜಾರಿ, ಅರ್ಚಕ. ಮಾಯಾ ಶಾಂಬರೀ – ೨ ಇಂದ್ರಜಾಲ ವಿದ್ಯೆ.

ಸ್ಯಾನ್ಮಾಯಾ ಶಾಂಬರೀ ಮಾಯಾಕಾರಸ್ತು ಪ್ರಾತಿಹಾರಿಕಃ |
ಶೈಲಾಲಿನಸ್ತು ಶೈಲೂಷಾ ಜಾಯಾಜೀವಾಃ ಕೃಶಾಶ್ವಿನಃ || ೮೧೦ ||
ಭರತಾ ಇತ್ಯಪಿ ನಟಾಶ್ಚಾರಣಾಸ್ತು ಕುಶೀಲವಾಃ |
ಮಾರ್ದಂಗಿಕಾ ಮೌರಜಿಕಾಃ ಪಾಣಿವಾದಾಸ್ತು ಪಾಣಿಘಾಃ || ೮೧೧ ||
ವೇಣುಧ್ಮಾಃ ಸ್ಯುರ್ವೈಣವಿಕಾ ವೀಣಾವಾದಾಸ್ತು ವೈಣಿಕಾಃ |
ಜೀವಾಂತಕಃ ಶಾಕುನಿಕೋ ದ್ವೌ ವಾಗುರಿಕಜಾಲಿಕೌ || ೮೧೨ ||
ವೈತಂಸಿಕಃ ಕೌಟಿಕಶ್ಚ ಮಾಂಸಿಕಶ್ಚ ಸಮಂ ತ್ರಯಮ್ |
ಭೃತಕೋ ಭೃತಭುಕ್ಕರ್ಮಕರೋ ವೈತನಿಕೋಪಿ ಸಃ || ೮೧೩ ||
ವಾರ್ತಾವಹೋ ವೈವಧಿಕೋ ಭಾರವಾಹಸ್ತು ಭಾರಿಕಃ |
ವಿವರ್ಣಃ ಪಾಮರೋ ನೀಚಃ ಪ್ರಾಕೃತಶ್ಚ ಪೃಥಗ್ಜನಃ || ೮೧೪ ||
ನಿಹೀನೋಽಪಶದೋ ಜಾಲ್ಮಃ ಕ್ಷುಲ್ಲಕಶ್ಚೇತರಶ್ಚ ಸಃ |
ಭೃತ್ಯೇ ದಾಸೇರ ದಾಸೇಯ ದಾಸ ಗೋಪ್ಯಕ ಚೇಟಕಾಃ | || ೮೧೫ ||

---

ಮಾಯಾಕಾರಃ ಪ್ರಾತಿಹಾರಕಃ — ಇಂದ್ರಜಾಲಗಾರ, ಯಕ್ಷಿಣಿಯವನು. || ೮೦೯ ||

ಶೈಲಾಲೀ (ನಾಂತ) ಶೈಲೂಷಃ ಜಾಯಾಜೀವಃ ಕೃಶಾಶ್ವೀ (ನಾಂತ) ಭರತಃ ನಟಃ — ೬ ನಟನ ಹೆಸರು, ನಟನೆ. ಚಾರಣಃ ಕುಶೀಲವಃ — ೨ ವೇಷಧಾರಿ, ಆಟಗಾರ. ಮಾರ್ದಂಗಿಕಃ ಮೌರಜಿಕಃ — ೨ ಮೃದಂಗ (ಮದ್ದಳೆ) ದವನು, ಪಾಣಿವಾದಃ ಪಾಣಿಘಃ — ೨ ತಾಳೆ ಹಾಕುವವನು. ವೇಣುಧ್ಮಃ (ಅಕಾರಾಂತ ಪು) ವೈಣವಿಕಃ — ೨ ಕೊಳಲುಗಾರ, ಕೊಳಲು ಊದುವವನು. ವೀಣಾವಾದಃ ವೈಣಿಕಃ — ವೀಣೆ ಬಾರಿಸುವವನು. ಜೀವಾಂತಕಃ ಶಾಕುನಿಕಃ — ೨ ಹಕ್ಕಿಗಳನ್ನು ಹಿಡಿದು ಜೀವಿಸುವವನು ಹಕ್ಕಿಬೇಡ. ವಾಗುರಿಕಃ ಜಾಲಿಕಃ — ೨ ಬೆಸ್ತರವನು, ಬಲೆಯೊಡ್ಡಿ ಮೃಗ ಹಿಡಿಯುವವನು. ವೈತಂಸಿಕಃ ಕೌಟಕಃ ಮಾಂಸಿಕಃ — ೩ ಮಾಟ ಮಾಡುವವನು, ಶೂನ್ಯಗಾರ, ಮಾಂಸ ಮಾರುವ ಕಟುಕ. ಭೃತಕಃ ಭೃತಿಭುಕ್ (ಜಾಂತ) ಕರ್ಮಕರಃ ವೈತನಿಕಃ — ೪ ಸಂಬಳದ ಆಳು, ಕೂಲಿಯವನು. ವಾರ್ತಾವಹಃ ವೈವಧಿಕಃ — ೨ ಬೀದಿ ವ್ಯಾಪಾರಿ, ಗೂಡೇ ವ್ಯಾಪಾರದವನು. ಭಾರವಾಹಃ ಭಾರಿಕಃ — ೨ ಭಾರ ಹೊರುವವನು. ವಿವರ್ಣಃ ಪಾಮರಃ ನೀಚಃ ಪ್ರಾಕೃತಃ ಪೃಥಗ್ಜನಃ ನಿಹೀನಃ ಅಪಶದಃ ಜಾಲ್ಮಃ ಕ್ಷುಲ್ಲಕಃ ಇತರಃ — ೧೦ ನೀಚ, ದುರಾಚಾರದವನು ಭೃತ್ಯಃ ದಾಸೇರಃ ದಾಸೇಯಃ ದಾಸಃ ಗೋಪ್ಯಕಃ ಚೇಟಕಃ ನಿಯೋಜ್ಯಃ ಕಿಂಕರಃ ಪ್ರೇಷ್ಯಃ ಭುಜಿಷ್ಯಃ ಪರಿಚಾರಕಃ — ೧೧

ನಿಯೋಜ್ಯಕಿಂಕರಪ್ರೇಷ್ಯ ಭುಜಿಷ್ಯ ಪರಿಚಾರಕಾಃ ॥ ೮೧೬ ॥
ಪರಾಚಿತ ಪರಾಸ್ಕಂದ ಪರಜಾತಪರೈಧಿತಾಃ ।
ಮಂದಸ್ತು ತುಂದಪರಿಮೃಜ ಆಲಸ್ಯಶ್ಶೀತಕೋಽಲಸೋಽನುಷ್ಣಃ ॥ ೮೧೭ ॥
ದಕ್ಷೇ ಚತುರಪೇಶಲ ಪಟವಸ್ಸೂತ್ಥಾನ ಉಷ್ಣಶ್ಚ ।
ಚಂಡಾಲಪ್ಲವಮಾತಂಗ ದಿವಾಕೀರ್ತಿ ಜನಂಗಮಾಃ ॥ ೮೧೮ ॥
ನಿಷಾದಶ್ವಪಚಾವಂತೇವಾಸಿ ಚಾಂಡಾಲ ಪುಲ್ಕ (ಕ್ಕ) ಸಾಃ ।
ಭೇದಾಃ ಕಿರಾತ ಶಬರ ಪುಲಿಂದಾ ಮ್ಲೇಚ್ಛಜಾತಯಃ ॥ ೮೧೯ ॥
ವ್ಯಾಧೋ ಮೃಗವಧಾಜೀವೋ ಮೃಗಯುರ್ಲುಬ್ಧಕೋಽಪಿ ಸಃ ।
ಕೌಲೇಯಕಃ ಸಾರಮೇಯಃ ಕುಕ್ಕುರೋ ಮೃಗದಂಶಕಃ ॥ ೮೨೦ ॥
ಶುನಕೋ ಭಷಕಃ ಶ್ವಾ ಸ್ಯಾದಲರ್ಕಸ್ತು ಸ ಯೋಗಿತಃ ।
ಶ್ವಾ ವಿಶ್ವಕದ್ರುರ್ಮೃಗಯಾಕುಶಲಸ್ಸರಮಾ ಶುನೀ ॥ ೮೨೧ ॥
ವಿಟ್ಚರಸ್ಸೂಕರೋ ಗ್ರಾಮ್ಯೋ ವರ್ಕರಸ್ತರುಣಃ ಪಶುಃ ।
ಆಚ್ಛೋದನಂ ಮೃಗವ್ಯಂ ಸ್ಯಾದಾಖೇಟೋ ಮೃಗಯಾ ಸ್ತ್ರಿಯಾಮ್ ॥ ೮೨೨ ॥

---

ಆಳು, ಚಾಕರಿಯವನು. ಪರಾಚಿತಃ ಪರಿಸ್ಕಂದಃ ಪರಜಾತಃ ಪರೈಧಿತಃ — ೪ ಹೇಡಿಯಾದ ಆಳು, ಕೈಲಾಗದ ಆಳು. ॥ ೮೧೬ ॥

ಮಂದಃ ತುಂದಃ ಪರಿಮೃಜಃ ಆಲಸ್ಯಃ ಶೀತಕಃ ಆಲಸಃ ಅನುಷ್ಣಃ — ೬ ಮೈಗಳ್ಳ, ಸೋಮಾರಿ. ದಕ್ಷಃ ಚತುರಃ ಪೇಶಲಃ ಪಟುಃ ಸೂತ್ಥಾನಃ ಉಷ್ಣಃ — ೬ ದಕ್ಷ, ಚಟುವಟಿಕೆಯುಳ್ಳವನು. ಚಂಡಾಲಃ ಪ್ಲವಃ ಮಾತಂಗಃ ದಿವಾಕೀರ್ತಿಃ ಜನಂಗಮಃ ನಿಷಾದಃ ಶ್ವಪಚಃ ಅಂತೇವಾಸೀ (ನಾಂತ) ಚಾಂಡಾಲಃ ಪುಲ್ಕಃ (ಕ್ಕ) ಸಃ — ೧೦ ಹೊಲೆಯ, ಚಾಂಡಾಲ. ಕಿರಾತಃ ಶಬರಃ ಪುಳಿಂದಃ — ೩ ಚಾಂಡಾಲರಲ್ಲಿ ಭೇದ, ಇವರಿಗೆ ಮ್ಲೇಚ್ಛರೆಂದು ಹೆಸರು. ನವಿಲು ಗರಿ ಹೊದಿಕೆಯುಳ್ಳವನು — ಕಿರಾತನು, ಸೊಪ್ಪುಸವೆ . ಹೊದ್ದಿರುವವನು ಶಬರನು, ಬಟ್ಟೆಬರೆ ಹೊದೆದವನು ಪುಳಿಂದನು. ವ್ಯಾಧಃ ಮೃಗವಧಾಜೀವಃ ಮೃಗಯುಃ ಲುಬ್ಧಕಃ — ಬೇಟೆಗಾರ, ಬೇಡ. ಕೌಲೇಯಕಃ ಸಾರಮೇಯಃ ಕುಕ್ಕುರಃ ಮೃಗದಂಶಕಃ ಶುನಕಃ ಭಷಕಃ ಶ್ವಾ (ನಾಂತ) — ೭ ನಾಯಿ. ಅಲರ್ಕಃ ೧ ಯೋಗಿತಃ ಸಃ — ವಿಷ ತಿಂದು ಹುಚ್ಚು ಹಿಡಿದ ನಾಯಿ. ವಿಶ್ವಕದ್ರುಃ — ಮೃಗಯಾ ಕುಶಲಃ — ಬೇಟೆ ನಾಯಿ. ಸರಮಾ ಶುನೀ — ಹೆಣ್ಣು ನಾಯಿ. ವಿಟ್ಚರಃ — ಗ್ರಾಮ್ಯಸೂಕರಃ — ಊರ ಹಂದಿ. ವರ್ಕರಃ (ಬರ್ಬರಃ) — ತರುಣಃ ಪಶುಃ — ಪ್ರಾಯದ ಪಶು. ಆಚ್ಛೋದನಂ ಮೃಗವ್ಯಂ ಆಖೇಟಃ ಮೃಗಯಾ — ೪ ಬೇಟೆ, ಶಿಕಾರಿ.

ದಕ್ಷಿಣಾರುರ್ಲುಬ್ಧಯೋಗಾದ್ದಕ್ಷಿಣೇರ್ಮಾ ಕುರಂಗಕಃ ।
ಚೋರೆಸ್ತೈ ಕಾಗರಿಕ ಸ್ತೇನ ದಸ್ಯು ತಸ್ಕರ ಮೋಷಕಾಃ ॥ ೬೨೩ ॥
ಪ್ರತಿರೋಧಿ ಪರಾಸ್ಕಂದಿ ಪಾಟಚ್ಚರ ಮಲಿಮ್ಲುಚಾಃ ।
ಚೌರಿಕಾ ಸ್ತೈನ್ಯ ಚೌರ್ಯೇ ಚ ಸ್ತೇಯಂ ಲೋಪ್ತ್ರಂ ತು ತದ್ಧನಮ್ ॥ ೬೨೪ ॥
ವೀತಂಸಸ್ತೂಪಕರಣಂ ಬಂಧನೇ ಮೃಗಪಕ್ಷಿಣಾಮ್ ।
ಉನ್ಮಾಥಃ ಕೂಟಯಂತ್ರಂ ಸ್ಯಾದ್ವಾಗುರಾ ಮೃಗಬಂಧನೀ ॥ ೬೨೫ ॥
ಶುಲ್ಬಂ (ಮ್ಬಂ) ವರಾಟಕಃ ಸ್ತ್ರೀ ತು ರಜ್ಜುಸ್ತ್ರಿಷು ವಟೀ ಗುಣಃ ।
ಉದ್ಘಾಟನಂ ಘಟೀಯಂತ್ರಂ ಸಲಿಲೋದ್ವಾಹನಂ ಪ್ರಹೇಃ ॥ ೬೨೬ ॥
ಪುಂಸಿ ವೇಮಾ ವಾಯ (ಪ) ದಂಡಸ್ಸೂತ್ರಾಣಿ ನರಿ ತಂತವಃ ।
ವಾಣಿರ್ವ್ಯೂತಿಃ ಸ್ತ್ರಿಯಸೌ ತುಲ್ಯೇ ಪುಸ್ತಂ ಲೇಪ್ಯಾದಿ ಕರ್ಮಣಿ ॥ ೬೨೭ ॥
ಪಾಂಚಾಲಿಕಾ ಪುತ್ರಿಕಾ ಸ್ಯಾದ್ವಸ್ತ್ರದಂತಾದಿಭಿಃ ಕೃತಾ ।
ಪಿಟಕಃ ಪೇಟಕಃ ಪೇಟಾ ಮಂಜೂಷಾಥ ವಿಹಂಗಿಕಾ ॥ ೬೨೮ ॥

---

ದಕ್ಷಿಣೇರ್ಮಾ (ನಾಂತ) — ಲುಬ್ಧಯೋಗಾತ್ ದಕ್ಷಿಣಾರುಃ ಕುರಂಗಕಃ — ಬೇಡನ ಬಾಣದಿಂದ ಬಲಗಡೆ ಏಟು ಬಿದ್ದಿರುವ ಜಿಂಕೆ. ॥ ೬೨೨ ॥

ಚೋರಃ ಐಕಾಗರಿಕಃ ಸ್ತೇನಃ ದಸ್ಯುಃ ತಸ್ಕರಃ ಮೋಷಕಃ ಪ್ರತಿರೋಧೀ ಪರಾಸ್ಕಂದೀ (೨ ನಾಂತ) ಪಾಟಚ್ಚರಃ ಮಲಿಮ್ಲುಚಃ — ೧೦ ಕಳ್ಳನ ಹೆಸರು. ಚೌರಿಕಾ ಸ್ತೈನ್ಯಂ ಚೌರ್ಯಂ ಸ್ತೇಯಂ — ೪ ಕಳ್ಳತನ. ಲೋಪ್ತ್ರಂ — ಕಳ್ಳತನದಿಂದ ಸಿಕ್ಕಿದ ವಸ್ತು, ಕದ್ದ ಮಾಲು. ವೀತಂಸಃ — ಮೃಗಗಳನ್ನೂ, ಹಕ್ಕಿಗಳನ್ನೂ ಹಿಡಿಯುವ ಸಾಧನ, ಉರುಲು. ಉನ್ಮಾಥಃ ಕೂಟಯಂತ್ರಂ — ಬೋನು, ಗಾಳ, ಇಲಿ ಕತ್ತರಿ. ವಾಗುರಾ ಮೃಗಬಂಧನೀ — ಮೃಗಗಳನ್ನು ಹಿಡಿಯುವ ಬಲೆ. ಶುಲ್ಬಂ ವರಾಟಕಃ (ವಟಾರಕಃ) ರಜ್ಜುಃ (ಸ್ತ್ರೀ) ವಟೀ (ತ್ರಿಲಿಂಗ) ಗುಣಃ — ೫ ನೇಣು, ಹುರಿ. ಉದ್ಘಾಟನಂ ಘಟೀಯಂತ್ರಂ — ಪ್ರಹೇಃ ಸಲಿಲೋದ್ವಾಹನಂ — ನೀರು ಎತ್ತುವ ರಾಟೆ, ಕಪಿಲೆ. ವೇಮಾ (ನಾಂತ) ವಾಯದಂಡಃ — ೨ ನೇಯುವ ಕೋಳವಿ. ಸೂತ್ರಂ ತಂತುಃ (ಪು) — ನೂಲು. ವಾಣಿಃ ವ್ಯೂತಿಃ — ನೇಯುವುದು. ಪುಸ್ತಂ — ೧ ಲೇಪ್ಯಾದಿ ಕರ್ಮಣಿ — ಬಣ್ಣ ಬಳಿಯುವುದು ಮುಂತಾದವು. ಪಾಂಚಾಲಿಕಾ ಪುತ್ರಿಕಾ — ೨ ವಸ್ತ್ರದಂತಾದಿಭಿಃ ಕೃತಾ ಸ್ಯಾತ್ — ಬಟ್ಟೆ, ಮರ, ದಂತಾದಿಗಳಿಂದ ಮಾಡಿದ ಬೊಂಬೆ. ॥ ೬೨೭ ॥

ಪಿಟಕಃ ಪೇಟಕಃ ಪೇಟಾ ಮಂಜೂಷಾ — ೪ ಪೆಟ್ಟಿಗೆ. ವಿಹಂಗಿಕಾ ಭಾರಯಷ್ಟಿಃ — ಕಾವಡಿಯ ಅಡ್ಡೆಕೋಲು. ಶಿಕ್ಯಂ ಕಾಚಃ ಅಡ್ಡೆಕೋಲಿನ

ಭಾರಯಷ್ಟಿಸ್ತದಾಲಂಬಿ ಶಿಕ್ಯಂ ಕಾಚೋಽಥ ಪಾದುಕಾ।
ಪಾದೂರುಪಾನತ್ ಸ್ತ್ರೀ ಸೈವಾನುಪದೀನಾ ಪದಾಯತಾ ॥ ೪೨೯ ॥
ನಧ್ರೀ ವಧ್ರೀ ವರತ್ರಾ ಸ್ಯಾದಶ್ವಾದೇಸ್ತಾಡನೀ ಕಶಾ।
ಚಾಂಡಾಲಿಕಾ ತು ಕಂಡೋಲವೀಣಾ ಚಂಡಾಲವಲ್ಲಕೀ ॥ ೪೩೦ ॥
ನಾರಾಚೀ ಸ್ಯಾದೇಷಣಿಕಾ ಶಾಣಸ್ತು ನಿಕಷಃ ಕಷಃ ।
ವ್ರಶ್ಚನಃ ಪತ್ರಪರಶುರೀಷಿಕಾ ತೂಲಿಕಾ ಸಮೇ ॥ ೪೩೧ ॥
ತೈಜಸಾವರ್ತನೀ ಮೂಷಾ ಭಸ್ತ್ರಾ ಚರ್ಮಪ್ರಸೇವಿಕಾ ।
ಆಸ್ಫೋಟನೀ ವೈಧನಿಕಾ ಕೃಪಾಣೀ ಕರ್ತರೀ ಸಮೇ ॥ ೪೩೨ ॥
ವೃಕ್ಷಾದನೋ ವೃಕ್ಷಭೇದೀ ಟಂಕಃ ಪಾಷಾಣದಾರಕಃ (ಣಃ) ।
ಕ್ರಕಚಃ ಕರಪತ್ರಂ ಸ್ಯಾದಾರಾ ಚರ್ಮಪ್ರಭೇದಿಕಾ ॥ ೪೩೩ ॥
ಸೂರ್ಮಿ ಸ್ಥೂಣಾಯಃ ಪ್ರತಿಮಾ ಶಿಲ್ಪಂ ಕರ್ಮ ಕಲಾದಿಕಮ್ ।

---

ಎರಡು ಕಡೆ ಇರುವ ನೆಲುವು, ಸಿಕ್ಕ. ಪಾದುಕಾ ಪಾದೂಃ ಉಪಾನತ್ (ಹಾಂತ ಸ್ತ್ರೀ) – ೩ ಎಕ್ಕಡ, ಬೂಟ್ಸು. ಅನುಪದೀನಾ – ಪದಾಯತಾ ಸಾ – ಕಾಲಿಗೆ ಸರಿಯಾದ ಎಕ್ಕಡ, ನಧ್ರೀ ವಧ್ರೀ ವರತ್ರಾ – ೩ ಚರ್ಮದ ಹಗ್ಗ ಕಶಾ – ಚಾವಟಿ, ಬಾರುಕೋಲು, ಚಾಂಡಲಿಕಾ ಕಂಡೋಲವೀಣಾ ಚಂಡಾಲವಲ್ಲಕೀ – ಮಾದಿಗರವನ ವೀಣೆ. ನಾರಾಚೀ ಏಷಣಿಕಾ – ತಕ್ಕಡಿ, ತೂಗುಗೋಲು. ಶಾಣಃ ನಿಕಷಃ ಕಷಃ – ೩ ಒರೆಗಲ್ಲು. ವ್ರಶ್ಚನಃ ಪತ್ರ ಪರಶುಃ – ೨ ಚೀರಣವೆಂಬ ಅಕ್ಕಸಾಲಿಗನ ಆಯುಧ. ಈಷಿಕಾ ತೂಲಿಕಾ – ೨ ಚಿತ್ರ ಬರೆಯುವ ಕಡ್ಡಿ, ಬ್ರಷ್. ತೈಜಸಾವರ್ತನೀ ಮೂಷಾ – ೨ ಮೂಸೆ, ಚಿನ್ನ ಮೊದಲಾದವುಗಳನ್ನು ಕರಗಿಸುವ ಮಣ್ಣಿನ ಕುಡಿಕೆ. ಭಸ್ತ್ರಾ ಚರ್ಮ ಪ್ರಸೇವಿಕಾ – ೨ ತಿದಿ. ಆಸ್ಫೋಟನೀ ವೈಧನಿಕಾ – ೨ ರತ್ನಾದಿಗಳಿಗೆ ಯೆಜ್ಜೆ ಹಾಕುವ ಬೈರಿಗೆ. ತೂತು ಕೊರೆಯುವ ಉಳಿ. ಕೃಪಾಣೀ ಕರ್ತರೀ – ೨ ಕತ್ತರಿ. ವೃಕ್ಷಾದನಃ ವೃಕ್ಷಭೇಧೀ (ಸ್ತ್ರೀ) – ಉಳಿ, ಕೊಡಲಿ, ಬಾಚಿ. ಟಂಕಃ ಪಾಷಾಣದಾರಣಃ – ೨ ಕಲ್ಲು ಕಡಿಯುವ ಉಳಿ. ಕ್ರಕಚಃ ಕರಪತ್ರಂ – ೨ ಗರಗಸ. ಆರಾ ಚರ್ಮಪ್ರಭೇದಿಕಾ – ೨ ಮೋಚಿಯವನ ಉಳಿ, ಚರ್ಮ ಕತ್ತರಿಸುವ ಉಳಿ. ಸೂರ್ಮಿಃ ಸ್ಥೂಣಾ ಅಯಃಪ್ರತಿಮಾ – ೩ ಕಬ್ಬಿಣದ ಪ್ರತಿಮೆ. ಶಿಲ್ಪಂ – ಶಿಲ್ಪಾದಿಕಂ ಕರ್ಮ – ವಾತ್ಸಾಯನನು ಹೇಳಿರುವ ನೃತ್ತ ಗೀತಾದಿ ೬೪ ಕಲೆಗಳಿಗೂ, ಆಲಿಂಗ ಚುಂಬನಾದಿಗಳಿಗೂ, ಅಕ್ಕಸಾಲೆ ಮುಂತಾದವರ ಕಾರ್ಯಕ್ಕೂ ಹೆಸರು.

ಪ್ರತಿಮಾನಂ ಪ್ರತಿಬಿಂಬಂ ಪ್ರತಿಮಾ ಪ್ರತಿಯಾತನಾ ಪ್ರತಿಚ್ಛಾಯಾ ‖ ೮೩೪ ‖
ಪ್ರತಿಕೃತಿರರ್ಚಾ ಪುಂಸಿ ಪ್ರತಿನಿಧಿರುಪಮೋಪಮಾನಂ ಸ್ಯಾತ್ ।
ವಾಚ್ಯಲಿಂಗಾಸ್ಸಮಸ್ತುಲ್ಯಸ್ಸದೃಕ್ಷಸ್ಸದೃಶಸ್ಸದೃಕ್ ‖ ೮೩೫ ‖
ಸಾಧಾರಣಸ್ಸಮಾನಶ್ಚ ಸ್ಯುರುತ್ತರಪದೇ ತ್ವಮೀ ।
ನಿಭ ಸಂಕಾಶನೀಕಾಶ ಪ್ರತೀಕಾಶೋಪಮಾದಯಃ ‖ ೮೩೬ ‖
ಕರ್ಮಣ್ಯಾ ತು ವಿಧಾ ಭೃತ್ಯಾ ಭೃತಯೋ ಭರ್ಮ ವೇತನಮ್ ।
ಭರಣ್ಯಂ ಭರಣಂ ಮೂಲ್ಯಂ ನಿರ್ವೇಶಃ ಪಣ ಇತ್ಯಪಿ ‖ ೮೩೭ ‖
ಸುರಾ ಹಲಿಪ್ರಿಯಾ ಹಾಲಾ ಪರಿಸ್ರುದ್ವರುಣಾತ್ಮಜಾ ।
ಗಂಧೋತ್ತಮಾ ಪ್ರಸನ್ನೇರಾ ಕಾದಂಬರ್ಯಃ ಪರಿಸ್ರುತಾ ‖ ೮೩೮ ‖
ಮದಿರಾ ಕಶ್ಯಮದ್ಯೇ ಚಾಪ್ಯವದಂಶಸ್ತು ಭಕ್ಷಣಮ್ ।
ಶುಂಡಾಪಾನಂ ಮದಸ್ಥಾನಂ ಮಧುವಾರಾ ಮಧುಕ್ರಮಾಃ ‖ ೮೩೯ ‖
ಮಧ್ವಾಸವೋ ಮಾಧವಕೋ ಮಧು ಮಾರ್ದ್ವೀಕಮದ್ವಯೋಃ ।

---

ಪ್ರತಿಮಾನಂ ಪ್ರತಿಬಿಂಬಂ ಪ್ರತಿಮಾ ಪ್ರತಿಯಾತನಾ ಪ್ರತಿಚ್ಛಾಯಾ ಪ್ರತಿಕೃತಿಃ ಅರ್ಚಾ ಪ್ರತಿನಿಧಿಃ (ಪುಂ) — ೮ ವಿಗ್ರಹ, ಪ್ರತಿಮೆ. ಉಪಮಾ ಉಪಮಾನಂ ೨ ಹೋಲಿಕೆ. ಸಮಃ ತುಲ್ಯಃ ಸದೃಕ್ಷಃ ಸದೃಶಃ ಸದೃಕ್ (ಶಾಂತ) ಸಾಧಾರಣಃ ಸಮಾನಃ — ೭ ಸಮಾನವಾದ ವಸ್ತು, ಇವು ತ್ರಿಲಿಂಗಗಳಾಗುತ್ತವೆ. ಉತ್ತರ ಪದದಲ್ಲಿರುತ್ತವೆ, ಉದಾ : — ಪಿತೃಸಮಃ ಚಂದ್ರತುಲ್ಯಃ ಇತ್ಯಾದಿ. ನಿಭಃ ಸಂಕಾಶಃ ನೀಕಾಶಃ ಪ್ರತೀಕಾಶಃ ಉಪಮಾ — ೫ ಸಮಾನಾರ್ಥಕಗಳು, ಇವೂ ತ್ರಿಲಿಂಗಗಳಾಗಿ ಉತ್ತರ ಪದದಲ್ಲಿಯೇ ಇರುತ್ತವೆ, ಉದಾ : ಚಂದ್ರ ಸಂಕಾಶಃ ಇತ್ಯಾದಿ. ಕರ್ಮಣ್ಯಾ ವಿಧಾ ಭೃತ್ಯಾ ಭೃತಿಃ ಭರ್ಮ (ನಾಂತ ನ) ವೇತನಂ ಭರಣ್ಯಂ ಭರಣಂ ಮೂಲ್ಯಂ ನಿರ್ವೇಶಃ ಪಣಃ — ೧೧ ಕೂಲಿ, ಸಂಬಳ, ಸುರಾ ಹಲಿಪ್ರಿಯಾ ಹಾಲಾ ಪರಿಸ್ರುತ್ (ತಾಂತ ಸ್ತ್ರೀ) ವರುಣಾತ್ಮಜಾ ಗಂಧೋತ್ತಮಾ ಪ್ರಸನ್ನಾ ಇರಾ ಕಾದಂಬರೀ ಪರಿಸ್ರುತಾ ಮದಿರಾ ಕಶ್ಯಂ ಮದ್ಯಂ — ೧೩ ಹೆಂಡ, ಮದ್ಯ, ಸರಾಯಿ. ಅವದಂಶಃ ಭಕ್ಷಣಂ — ೨ ಹೆಂಡ ಕುಡಿಯುವಾಗ ಅಥವಾ ಭೋಜನದಲ್ಲಿ ನಂಚಿಕೊಳ್ಳುವ ಪದಾರ್ಥ, ಮಾಂಸ ಉಪ್ಪಿನಕಾಯಿ ಮೊದಲಾದವು. ಶುಂಡಾ ಪಾನಂ ಮದಸ್ಥಾನಂ — ೩ ಪಾನಗೃಹ, ಮದ್ಯಪಾನ ಮಾಡುವವನ ಮನೆ. ಮಧುವಾರಃ ಮಧುಕ್ರಮಃ — ೨ ಮದ್ಯಪಾನ ಮಾಡುವ ಕ್ರಮ, ಹಲವುಸಾರಿ ಕುಡಿಯುವುದು. ಮಧ್ವಾಸವಃ ಮಾಧವಕಃ ಮಧು — ಹಿಪ್ಪೇ ಹೂವಿಂದ ಮಾಡಿದ ಹೆಂಡ. ಮಾರ್ದ್ವೀಕಂ — ದ್ರಾಕ್ಷಾರಸ. ‖ ೮೩೯ ‖

ಮೈರೇಯ ಮಾಸವಶ್ಶೀಧುರ್ಮೇದಕೋ ಜಗಲಸ್ಸಮೌ ॥ ೮೪೦ ॥
ಸಂಧಾನಂ ಸ್ಯಾದಭಿಷವಃ ಕಿಣ್ವಂ ಪುಂಸಿ ತು ನಗ್ನಹೂಃ ।
ಕಾರೋತ್ತಮಂಸುರಾಮಂಡ. ಆಪಾನಂ ಪಾನಗೋಷ್ಠಿಕಾ ॥ ೮೪೧ ॥
ಚಷಕೋಽಸ್ತ್ರೀ ಪಾನಪಾತ್ರಂ ಸರಕೋಪ್ಯನುತರ್ಷಣಂ ।
ಧೂರ್ತೋಕ್ಷದೇವಿ ಕಿತವೋಕ್ಷಧೂರ್ತೋದ್ಯೂತಕೃತ್ಸಮಾಃ ॥ ೮೪೨ ॥
ಸ್ಯುರ್ಲಗ್ನಕಾಃ ಪ್ರತಿಭುವಃ ಸಭಿಕಾ ದ್ಯೂತಕಾರಕಾಃ ।
ದ್ಯೂತೋಽಸ್ತ್ರಿಯಾಮಕ್ಷವತೀ ಕೈತವಂ ಪಣ ಇತ್ಯಪಿ ॥೮೪೩॥
ಪಣೋಕ್ಷೇಷು ಗ್ಲಹೋಕ್ಷಾಸ್ತು ದೇವಕಾಃ ಪಾಶಕಾಶ್ಚ ತೇ ।
ಪರಿಣಾಯಸ್ತು ಶಾರೀಣಾಂ ಸಮಂತಾನ್ನಯನೇಸ್ತ್ರಿಯಾೌ ॥ ೮೪೪ ॥
ಅಷ್ಟಾಪದಂ ಶಾರಿಫಲಂ ಪ್ರಾಣಿದ್ಯೂತಂ ಸಮಾಹ್ವಯಃ ।
ಉಕ್ತಾ ಭೂರಿಪ್ರಯೋಗತ್ವಾದೇಕಸ್ಮಿನ್ ಯತ್ರ ಯೌಗಿಕಾಃ ॥೮೪೫॥

---

ಮೈರೇಯಂ — ಬೆಲ್ಲದಿಂದ ಮಾಡಿದ ಹೆಂಡ ಆಸವಃ — ಕಬ್ಬಿನ ರಸದಿಂದ ಆದ ಹೆಂಡ ಶೀಧುಃ — ಕಾಸಿದ ಕಬ್ಬಿನ ರಸದಿಂದ ಮಾಡಿದ ಹೆಂಡ. ಮೇದಕಃ ಜಗಲಃ — ೨ ಮದ್ಯ ಮಾಡಲು ಬೇಕಾಗುವ ನಾನಾ ಪದಾರ್ಥಗಳ ಮುದ್ದೆ. ಸಂಧಾನಂ ಅಭಿಷವಃ — ೨ ಹೆಂಡ ಮಾಡುವುದು. ಕಿಣ್ವಂ ನಗ್ನಹೂಃ — ೨ ಹೆಂಡಮಾಡುವ ಮಡಿಕೆ. ಕಾರೋತ್ತಮಂ ಸುರಾಮಂಡಃ — ಮದ್ಯದ ತಿಳಿ. ಆಪಾನಂ ಪಾನಗೋಷ್ಠಿಕಾ — ೨ ಅನೇಕರು ಕೂಡಿ ಹೆಂಡ ಕುಡಿಯುವ ಸ್ಥಳ. ಚಷಕಃ ಪಾನಪಾತ್ರಂ—೨ ಹೆಂಡ ಕುಡಿಯುವ ಪಾತ್ರೆ. ಸರಕಃ ಅನುತರ್ಷಣಂ —೨ ಮದ್ಯತುಂಬಿ ಸುರಿಯುವ ಪಾತ್ರೆ: ಧೂರ್ತಃ ಅಕ್ಷದೇವಿ ಕಿತವಃ ಅಕ್ಷಧೂರ್ತಃ ದ್ಯೂತಕೃತ್ — ೫ ಜೂಜಾಡುವವನು. ಲಗ್ನಕಃ ಪ್ರತಿಭೂಃ — ಹೊಣೆಗಾರ, ಜಾಮೀನುದಾರ. ಸಭಿಕಃ ದ್ಯೂತಕಾರಕಃ — ೨ ಜೂಜಾಡಿಸು ವವನು. ದ್ಯೂತಃ ಅಕ್ಷವತೀ ಕೈತವಂ ಪಣಃ — ೪ ಜೂಜಾಟ. ಗ್ಲಹಃ — ಜೂಜಿನಲ್ಲಿ ಪಂದ್ಯ, ನಿಗದಿಯಾಗಿ ಕಟ್ಟಿದ ವಸ್ತು. ಅಕ್ಷಾಃ ದೇವಕಾಃ ಪಾಶಕಾಃ — ಪಗಡೆ, ಚದುರಂಗ. ಪರಿಣಾಯಃ — ಶಾರೀಣಾಂ ಸಮಂತಾನ ಯನೇ — ಪಗಡೇಕಾಯಿ ನಡೆಸುವುದು, ಆಡುವುದು. ಅಷ್ಟಾಪದಂ ಶಾರಿಫಲಂ — ೨ ಚದುರಂಗದ ಹಲಿಗೆ ಮುಂತಾದವುಗಳು. ಪ್ರಾಣಿದ್ಯೂತಂ ಸಮಾಹ್ವಯಃ —ಕೋಳಿ ಮುಂತಾದ ಪ್ರಾಣಿಗಳ ಜೂಜು, ಕೋಳೀ ಜೂಜು, ಟಗರಿನ ಕುಸ್ತಿ.

ಯತ್ರ — ಯಾವ ಶೂದ್ರವರ್ಗದಲ್ಲಿ, ಯೌಗಿಕಾಃ — ಮಾಲಾಕಾರ ಮುಂತಾದ ಯೌಗಿಕ ಪದಗಳು, ಭೂರಿಪ್ರಯೋಗತ್ವಾತ್ — ಪ್ರಯೋಗಬಾಹುಳ್ಯ ದಿಂದ, ಏಕಸ್ಮಿನ್ — ಒಂದೇ ಪುಲ್ಲಿಂಗದಲ್ಲಿ, ಉಕ್ತಾಃ — ಹೇಳಲ್ಪಟ್ಟವೆಯೋ,

ತಾದ್ಧರ್ಮ್ಯಾದನ್ಯತೋ ವೃತ್ತಾಸ್ತೂಹ್ಯಾ ಲಿಂಗಾಂತರೇಪಿ ತೇ ।

ಇತಿ ಶೂದ್ರವರ್ಗಃ

ಇತ್ಯಮರ ಸಿಂಹಕೃತೌ ನಾಮಲಿಂಗಾನುಶಾಸನೇ

ಭೂಮಿಕಾಂಡೋ ದ್ವಿತೀಯೋಽಯಂ ಸಾಂಗ ಏವ ಸಮರ್ಥಿತಃ ।

ಇತಿ ನಾಮಲಿಂಗಾನುಶಾಸನೇ ದ್ವಿತೀಯಕಾಂಡಃ ॥ ೮೪೬ ॥

---

ತೇ — ಆ ಶಬ್ದಗಳು, ತಾದ್ಧರ್ಮ್ಯಾತ್ — ಆಯಾಯ ಧರ್ಮಗಳಿರುವುದರಿಂದ, ಅನ್ಯತಃ ವೃತ್ತಾಃ ಸಂತಃ — ಪುಲ್ಲಿಂಗಕ್ಕಿಂತ ಬೇರೆಯಾದ ಸ್ತ್ರ್ಯಾದಿಲಿಂಗಗಳಲ್ಲಿಯೂ ಇರುವವುಗಳಾಗಿ, ಲಿಂಗಾತರೇಪಿ ಚ — ಸ್ತ್ರೀ ನಪುಂಸಕ ಲಿಂಗಗಳಲ್ಲಿಯೂ ಇರುತ್ತನೆಂದು. ಊಹ್ಯಾಃ — ತಿಳಿಯಬೇಕು.

ಮಾಲೆಯನ್ನು ಮಾಡುವವನು ಮಾಲಾಕಾರ, ಇದು ಯೌಗಿಕ ಪದ. ಇಂತಹ ಶಬ್ದಗಳು ಅಧಿಕವಾಗಿ ಪುಲ್ಲಿಂಗದಲ್ಲಿಯೇ ಪ್ರಯೋಗಿಸಲ್ಪಡುವುದರಿಂದ ಅಮರದಲ್ಲಿ ಪುಲ್ಲಿಂಗದಲ್ಲಿಯೇ ಹೇಳಿವೆ. ಆಯಾಯ ವೃತ್ತಿಯುಳ್ಳವರು ಸ್ತ್ರೀಯರೂ ಆಗಬಹುದು. ಆದುದರಿಂದ ಶೂದ್ರಾದಿ ಶಬ್ದಗಳಂತೆ ಅವುಗಳನ್ನು ತ್ರಿಲಿಂಗದಲ್ಲಿಯೂ ತಿಳಿಯಬೇಕು. ಉದಾ : — ಮಾಲಾಕಾರಃ ಪುರುಷಃ. ಮಾಲಾಕಾರೀ ಸ್ತ್ರೀ. ಮಾಲಾಕಾರಂ ವೃಂದಮ್. ಹೀಗೆಯೇ ಮಾರ್ದಂಗಿಕಾದಿ ಪದಗಳನ್ನು ತಿಳಿಯಬೇಕು.

ಹೀಗೆ ಅಮರಸಿಂಹ ಕವಿಯಿಂದ ರಚಿತವಾದ ನಾಮಲಿಂಗಾನುಶಾಸನವೆಂಬ ಗ್ರಂಥದಲ್ಲಿ ಭೂಮಿಕಾಂಡವೆಂಬ ದ್ವಿತೀಯ ಕಾಂಡವು ಸಾಂಗವಾಗಿ ಹೇಳಲ್ಪಟ್ಟಿವೆ. ॥ ೮೪೬ ॥

ಅಮರಕೋಶ ಕನ್ನಡ ವ್ಯಾಖ್ಯಾನದಲ್ಲಿ ಎರಡನೇ ಕಾಂಡ ಮುಗಿದಿದೆ.

|| ಶ್ರೀಃ ||

## ವನೌಷಧಿವರ್ಗಃ ೪

ಅಟವ್ಯರಣ್ಯಂ ವಿಪಿನಂ ಗಹನಂ ಕಾನನಂ ವನಮ್ ।
ಮಹಾರಣ್ಯಮರಣ್ಯಾನೀ ಗೃಹಾರಾಮಸ್ತು ನಿಷ್ಕುಟಃ ||೬೬೭||
ಆರಾಮಸ್ಸ್ಯಾದುಪವನಂ ಕೃತ್ರಿಮಂ ವನಮೇವ ತತ್ ।
ಅಮಾತ್ಯಗಣಿಕಾಗೇಹೋಪವನೇ ವೃಕ್ಷವಾಟಿಕಾ ||೬೬೮||
ಪುಮಾನಾಕ್ರೀಡಉದ್ಯಾನಂ ರಾಜ್ಞಸ್ಸಾಧಾರಣಂ ವನಮ್ ।
ಸ್ಯಾದೇತದೇವಪ್ರಮದವನಮಂತಃಪುರೋಚಿತಮ್ ||೬೬೯||
ವೀಥ್ಯಾಳಿರಾವಳಿಃ ಪಂಕ್ತಿಶ್ಶ್ರೇಣೀ ರೇಖಾಸ್ತು ರಾಜಯಃ ।
ವನ್ಯಾ ವನಸಮೂಹೇ ಸ್ಯಾದಂಕುರೋಭಿನವೋದ್ಭಿದಿ ||೬೭೦||
ವೃಕ್ಷೋ ಮಹೀರುಹಶ್ಶಾಖೀ ವಿಟಪೀ ಪಾದಪಸ್ತರುಃ ।
ಅನೋಕಹಃ ಕುಟಸ್ಸಾಲಃ ಪಲಾಶೀ ದ್ರುದ್ರುಮಾಗಮಾಃ ||೬೭೧||
ವಾನಸ್ಪತ್ಯಃ ಫಲೈಃ ಪುಷ್ಪಾತ್ತೈರಪುಷ್ಪಾದ್ವನಸ್ಪತಿಃ ।

---

ಅಟವೀ (ಸ್ತ್ರೀ) ಅರಣ್ಯಂ ವಿಪಿನಂ ಗಹನಂ ಕಾನನಂ ವನಂ — ೬ ಕಾಡಿನ ಹೆಸರು, ಕಾನನ, ವನ ತೋಟಕ್ಕೂ ಹೆಸರಾಗುತ್ತದೆ. ಮಹಾರಣ್ಯಂ ಅರಣ್ಯಾನೀ (ಸ್ತ್ರೀ)—ದೊಡ್ಡ ಅಡವಿ ಗೊಂಡಾರಣ್ಯ. ಗೃಹಾರಾಮಃ ನಿಷ್ಕುಟಃ —೨ ಹಿತ್ತಲತೋಟ, ಮನೆಯ ಕೈತೋಟ. ಆರಾಮಃ ಉಪವನಂ-ಕೃತ್ರಿಮಂವನಂ — ೩ ಕಾಡುತೋಟ, ಅಡವಿಯಂತೆ ಮನುಷ್ಯರಿಂದ ಮಾಡಿದ ಊರ ಹೊರಗಿನ ತೋಟ. ವೃಕ್ಷವಾಟಿಕಾ—ಶೃಂಗಾರವೃಕ್ಷವಾಟ, ಮಂತ್ರಿ ಸೂಳೆ ಮುಂತಾದವರ ಮನೆಗಳಲ್ಲಿ ಕ್ರೀಡಾರ್ಥವಾಗಿ ಮಾಡಿದ ತೋಟ. ಆಕ್ರೀಡಃ ಉದ್ಯಾನಂ—೩ ರಾಜ್ಞಸ್ಸಾಧಾರಣಂ ವನಂ — ಸಕಲರಿಗೂ ವಿಹಾರಯೋಗ್ಯವಾಗುವಂತೆ ರಾಜರಿಂದ ಮಾಡಿಸಿದ ಊರ ಉದ್ಯಾನವನ. ಪ್ರಮದವನಂ — ಅಂತಃಪುರೋಚಿತಂ — ಅರಮನೆಯ ರಾಣೀ ವಾಸಕ್ಕೆ ಮಾತ್ರ ಕಟ್ಟಿಸಿದ ಅರಸಿನ ಶೃಂಗಾರವನ್ನು ವೀಥೀ. ಆಳಿಃ ಆವಳಿಃ ಪಂಕ್ತಿಃ ಶ್ರೇಣಿಃ — ೫ ಸಾಲು. ರೇಖಾ ರಾಜಿಃ — ೨ ಗೆರೆ, ಸಾಲು. ವನ್ಯಾ — ವನಸಮೂಹೇ — ವನಗಳ ಗುಂಪು, ಕಾಡುಗಳ ಸಮುದಾಯ. ಅಂಕುರಃ — ಅಭಿನವೋದ್ಭಿದಿ — ಹೊಸದಾಗಿ ಬಂದ ಮೊಳಕೆ. ವೃಕ್ಷಃ ಮಹೀರುಹಃ ಶಾಖೀ ವಿಟಪೀ (೨ ನಾಂತ) ಪಾದಪಃ ತರುಃ ಅನೋಕಹಃ ಕುಟಃ ಸಾಲಃ ಪಲಾಶೀ (ನಾಂತ) ದ್ರುಃ ದ್ರುಮಃ ಅಗಮಃ — ೧೩ ಮರಗಿಡಗಳು. ವಾನಸ್ಪತ್ಯಃ — ಪುಷ್ಪಾತ್ ಫಲೈಶ್ಚ ಯುಕ್ತಾಃ — ಹೂವಾಗಿ ಕಾಯಿಬಿಟ್ಟು ಹಣ್ಣುಗಳನ್ನು ಕೊಡುವ ಮಾವು, ತೆಂಗು ಮುಂತಾದವುಗಳು. ವನಸ್ಪತಿಃ — ಅಪುಷ್ಪಾತ್ — ಹೂವಿಲ್ಲದೆ ಕಾಯಿಬಿಡುವ ಹಲಸು

ಓಷಧ್ಯಃ ಫಲಪಾಕಾಂತಾಃ ಸ್ಯಾದವಂಧ್ಯಃ ಫಲೇಗ್ರಹಿಃ ||೮೫೨||
ವಂಧ್ಯೋಽಫಲೋಽವಕೇಶೀ ಚ ಫಲವಾನ್ ಫಲಿನಃ ಫಲೀ |
ಪ್ರಫುಲ್ಲೋತ್ಫುಲ್ಲಸಂಫುಲ್ಲವ್ಯಾಕೋಚವಿಕಚಸ್ಫುಟಾಃ ||೮೫೩||
ಫುಲ್ಲಶ್ಚೈತೇ ವಿಕಸಿತೇ ಸ್ಯುರವಂಧ್ಯಾದಯಸ್ತ್ರಿಷು |
ಸ್ಥಾಣುರಸ್ತ್ರೀ ಧ್ರುವಶ್ಶಂಕುರ್ಹ್ರಸ್ವಶಾಖಾ ಶಿಫಃ ಕ್ಷುಪಃ ||೮೫೪||
ಅಪ್ರಕಾಂಡೇ ಸ್ತಂಬಗುಲ್ಮೌ ವಲ್ಲೀತು ವ್ರತತಿರ್ಲತಾ |
ಲತಾ ಪ್ರತಾನಿನೀ ವೀರುದ್ಗುಲ್ಮಿನ್ಯುಲಪ ಇತ್ಯಪಿ ||೮೫೫||
ನಗಾದ್ಯಾರೋಹ ಉಚ್ಛ್ರಾಯ ಉತ್ಸೇಧಶ್ಚೋಚ್ಛ್ರಯಶ್ಚ ಸಃ |
ಅಸ್ತ್ರೀ ಪ್ರಕಾಂಡಃ ಸ್ಕಂಧಸ್ಸ್ಯಾನ್ಮೂಲಾಚ್ಛಾಖಾವಧೇಸ್ತರೋಃ ||೮೫೬||
ಸಮೇ ಶಾಖಾಲತೇ ಸ್ಕಂಧಶಾಖಾಶಾಲೇ ಶಿಫಾಜಟೇ |
ಶಾಖಾ ಶಿಫಾವರೋಹಸ್ಸ್ಯಾನ್ಮೂಲಾಚ್ಚಾಗ್ರಂ ಗತಾ ಲತಾ ||೮೫೭||

---

ಮುಂತಾದವುಗಳು. ಓಷಧ್ಯಃ — ಫಲಪಾಕಾಂತಃ — ಹಣ್ಣು ಬಿಟ್ಟ ಕೂಡಲೇ ಗಿಡ ಒಣಗಿ ಹೋಗುವ ಬಾಳೆ ಬತ್ತ ಮುಂತಾದ ಬೆಳೆಗಳು. ಅವಂಧ್ಯಃ ಫಲೇಗ್ರಹೀ — ೨ ಗೊಡ್ಡಾಗದೆ ಕಾಲಕ್ಕೆ ಸರಿಯಾಗಿ ಫಲ ಬಿಡುವ ಫಲವೃಕ್ಷ. ||೮೫೨||

ವಂಧ್ಯಃ ಅಫಲಃ ಅವಕೇಶೀ (ನಾಂತ)—೩ ಫಲಬಿಡದ ಮರ ಫಲವಾನ್ (ತಾಂತ) ಫಲಿನಃ ಫಲೀ (ನಾಂತ) ೩ ಕಾಲದಲ್ಲಿ ಹಣ್ಣು ಕೊಡುವ ಮರ. ಪ್ರಫುಲ್ಲಃ ಉತ್ಫುಲ್ಲಃ ಸಂಫುಲ್ಲಃ ವ್ಯಾಕೋಚಃ ವಿಕಚಃ ಸ್ಫುಟಃ ಫುಲ್ಲಃ ವಿಕಸಿತಃ — ಅರಳಿ ಹೂವುಳ್ಳ ಗಿಡಮರಗಳು, ಚಿಗುರಿದ ಗಿಡ, ಅರಳಿದ ಹೂ. ಅವಂಧ್ಯಾದಯಃ ತ್ರಿಷು — ಅವಂಧ್ಯಪದದಿಂದ ವಿಕಸಿತ ಪದದವರೆಗೆ ತ್ರಿಲಿಂಗಗಳಾಗುತ್ತವೆ. ಸ್ಥಾಣುಃ ಧ್ರುವಃ ಶಂಕುಃ — ೩ ಮೋಟುಮರ. ಕ್ಷುಪಃ —ಹ್ರಸ್ವಶಾಖಾಶಿಫಃ — ತುಂಡು ರೆಂಬೆಗಳೂ ಬಿಳಲೂ ಇರುವ ಗುಜ್ಜುಮರ. —ಸ್ತಂಬಃ ಗುಲ್ಮಃ — ೨ ಅಪ್ರಕಾಂಡೇ — ಕಾಂಡವಿಲ್ಲದೆ ಗುಂಪಾಗಿ ಎಲೆ ಬೆಳೆದಿರುವ ಪೊದೆ. ವಲ್ಲೀ ವ್ರತತಿಃ ಲತಾ — ೨ ಬಳ್ಳಿ, ಹಂಬು. ವೀರುತ್ (ಧಾಂತ) ಗುಲ್ಮಿನೀ ಉಲಪಃ — ೩ ಪ್ರತಾನಿನೀ ಲತಾ — ಬಳ್ಳಿಗಳ ಗುಂಪುಳ್ಳ ಪೊದೆ. ಉಚ್ಛ್ರಾಯಃ ಉತ್ಸೇಧಃ ಉಚ್ಛ್ರಯಃ — ೩ ನಗಾದ್ಯಾರೋಹಃ — ಪರ್ವತಾದಿಗಳ ಉದ್ದ, ಅತಿ ಎತ್ತರವಾಗಿ ಬೆಳೆದ ಮರ. ಪ್ರಕಾಂಡಃ (ಪುಂ ನ) ಸ್ಕಂಧಃ — ಮೂಲಾತ್ ಶಾಖಾವಧೇಸ್ತರೋಃ — ಬುಡದಿಂದ ಕೊಂಬೆಯವರೆಗೆ ಇರುವ ಭಾಗ. ಶಾಖಾ ಲತಾ — ೨ ಕೊಂಬೆ, ಸ್ಕಂಧಶಾಖಾ ಶಾಲಾ — ೨ ಗಿಡದ ಕೆಳಗಡೆ ಇಳಿ ಬಿದ್ದಿರುವ ಗಿಡದ ಬಿಳಲು. ಶಿಫಾ ಜಟಾ — ೨ ಗಿಡದ ಕೆಳಗೆ ಜಡೆಯಂತೆ ಇಳಿ ಬಿದ್ದಿರುವ ಸಣ್ಣ ಸಣ್ಣ ಬಿಳಲು. ಅವರೋಹಃ —ಶಾಖಾ

